# ಭಾಷೆಯ ವಿನ್ಯಾಸ ಲಕ್ಷಣಗಳು

*ಮಾನವ ಭಾಷೆಯು ನಮ್ಮ ವ್ಯಕ್ತಿತ್ವ, ನಡವಳಿಕೆ, ಸಮಾಜ ಹಾಗೂ ಇತರ ಎಲ್ಲ ಚೌಕಟ್ಟುಗಳೊಂದಿಗೆ ಇಡೀ ಜೀವನವನ್ನು ನಿಯಂತ್ರಿಸುವಂತಹ ಸಾಧನವಾಗಿದೆ. ಸಂಕೀರ್ಣ ತಂತ್ರಜ್ಞಾನ, ಸಾಂಸ್ಕೃತಿಕ ಆಳ ಮತ್ತು ಸಮೃದ್ಧಿ, ವರ್ಧಿತ ಜ್ಞಾನ, ತನ್ನಲ್ಲೇ ಹೆಣೆದುಕೊಂಡಿರುವ ಸಮಾಜ ಮತ್ತು ರಾಜ್ಯ ಇವೆಲ್ಲವೂ... ಭಾಷೆ ಇಲ್ಲದೆ ಬಹುಶಃ ಯಾವುದೂ ಸಾಧ್ಯವಿಲ್ಲ. ಇದಕ್ಕೆಲ್ಲ ದಾರಿ ತೋರುವ ಮಾನವ ಭಾಷೆಯಲ್ಲಿ ಏನಿದೆ ಎಂಬುದು ಮುಖ್ಯವಾದ ಪ್ರಶ್ನೆ. ಪ್ರಾಣಿಗಳಲ್ಲಿ ಸಂವಹನದ ಅನೇಕ ಉದಾಹರಣೆಗಳಿವೆ ಹಾಗೂ ಎಲ್ಲ ಪ್ರಾಣಿಗಳಲ್ಲದಿದ್ದರೂ ಕನಿಷ್ಠ ಕೆಲವು ಪ್ರಾಣಿಗಳು ಸಂವಹನಕ್ಕೆ ಧ್ವನಿಯನ್ನು ಬಳಸುತ್ತವೆ. ಈ ಸಂವಹನದ ಕೆಲವು ಉದಾಹರಣೆಗಳೆಂದರೆ ಜೇನುನೊಣಗಳ ನೃತ್ಯ, ಪಕ್ಷಿಗಳ ಕೂಗು, ನಾಯಿಗಳು ಮತ್ತು ತೋಳಗಳು ಮಾನವ ಸೂಚನೆಗಳನ್ನು ಅರ್ಥಮಾಡಿಕೊಳ್ಳುವುದು, ಮಂಗಗಳ ಮಾತುಕತೆ ಮುಂತಾದವುಗಳು. ಹಾಗಾದರೆ ಮಾನವ ಭಾಷೆಯಲ್ಲಿ ಅಂತಹ ವಿಶೇಷವಾದರೂ ಏನಿದೆ? ಈ ಪ್ರಶ್ನೆಗೆ ಹೋಗುವ ಮೊದಲು, ಭಾಷೆ ಮತ್ತು ಅದರ ಉಪಯೋಗಗಳನ್ನು ನೋಡೋಣ. ಯಾವುದೇ ಸಂವಹನಕ್ಕಾಗಿ, ಬಳಸಿದ ಸಂಕೇತಗಳನ್ನು ಆ ಸಂವಹನದಲ್ಲಿ ಭಾಗವಹಿಸುವ ಮಾತನಾಡುವವರು ಮತ್ತು ಕೇಳುಗರು ಇಬ್ಬರೂ ಸಹ ಅರ್ಥಮಾಡಿಕೊಳ್ಳಬೇಕು. ಇದನ್ನು ನಾವು ಮತ್ತಷ್ಟು ಆಳವಾಗಿ ನೋಡುವುದಾದಲ್ಲಿ ಚಿಹ್ನೆಗಳು ಅಥವಾ ಶಬ್ದ ಸಂಕೇತಗಳು ಅಥವಾ ಸಂಕೇತಗಳನ್ನು ಅರ್ಥಪೂರ್ಣವಾಗಿ ಸಂಯೋಜಿಸುವ ಮೂಲಕವೇ ಎಲ್ಲ ರೀತಿಯ ಸಂವಹನ ಸಾಧ್ಯವಾಗುತ್ತದೆ.*

***

ಸಂಕೇತಗಳು ಹಲವು ರೀತಿಯವು ಆಗಿರಬಹುದು; ಗುರುಗುಟ್ಟುವುದು, ಕೂಗುವುದು, ನರಳುವುದು, ತೋಳುಗಳನ್ನು ಬೀಸುವುದು, ದೇಹವನ್ನು ಅಲುಗಾಡಿಸುವುದು ಇತ್ಯಾದಿ. ಆದಾಗ್ಯೂ ಚಿಂಪಾಂಜಿ, ಬಬೂನ್, ಇತ್ಯಾದಿಗಳು ಕೆಲವು ಸಂಕೇತ ಅಥವಾ ಚಿನ್ಹೆಗಳನ್ನು (ಲೆಕ್ಸಿಗ್ರಾಮ್ಸ್) ಬಳಸುತ್ತವೆ. ಇದರಿಂದಾಗಿ ನಾವು ಗೆರಿಲ್ಲಾಗಳಿಗೆ ಅನೇಕ ಪದಗಳನ್ನು ಕಲಿಸಲು ಸಾಧ್ಯವಾಗಿದೆ, ಆದರ ಆ ಕಲಿಕೆಯು ಸೀಮಿತವಾದುದು. ಮಾನವ ಭಾಷೆಯಲ್ಲಿ ಸಂಕೇತಗಳ ಹೊರತಾಗಿ ಇನ್ನೂ ಅನೇಕ ಚಿಹ್ನೆಗಳು ಇವೆ. ಈ ಚಿಹ್ನೆಗಳನ್ನು ವಿವಿಧ ಅನುಕ್ರಮಗಳಲ್ಲಿ ಸಂಯೋಜಿಸುವ ಮೂಲಕ ಎಲ್ಲ ಸಂಕೇತಗಳು ರೂಪುಗೊಳ್ಳುತ್ತವೆ ಮತ್ತು ಅವುಗಳಿಂದ ಹೊಸ ಸಂಕೇತಗಳೂ ಸಹ ನಿರ್ಮಾಣವಾಗಬಹುದು, ಆದರೆ ಇತರ ಪ್ರಾಣಿಗಳ ಭಾಷೆಯಲ್ಲಿ ಇದು ಸಾಧ್ಯವಿಲ್ಲ. ಅಂದರೆ, ಮಾನವ ಭಾಷೆಗಳ ವ್ಯವಸ್ಥೆ ಮತ್ತು ರಚನೆಯು ಮುಕ್ತವಾಗಿದೆ ಮತ್ತು ಉಳಿದವುಗಳ ಚೌಕಟ್ಟು ಸೀಮಿತವಾಗಿದೆ.

1960 ರ ದಶಕದಲ್ಲಿ, ಭಾಷಾಶಾಸ್ತ್ರದ ಮಾನವಶಾಸ್ತ್ರಜ್ಞ ಚಾರ್ಲ್ಸ್ ಎಫ್. ಹಾಕೆಟ್ ರವರು ಪ್ರಾಣಿಗಳ ಭಾಷೆಗಳಿಂದ ಮಾನವ ಭಾಷೆಗಳನ್ನು ಪ್ರತ್ಯೇಕಿಸುವ ಕೆಲವು ಗುಣಲಕ್ಷಣಗಳನ್ನು ಗುರುತಿಸಿದರು ಮತ್ತು ಅವುಗಳನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸಿದರು. ಮಾನವ ಭಾಷೆಗಳಲ್ಲಿ 13 ಗುಣಗಳಿವೆ ಎಂದು ಹಾಕೆಟ್ ಭಾವಿಸಿದ್ದರು. ಈ 13 ಗುಣಗಳಲ್ಲಿ ಒಂಬತ್ತು ಇತರ ಕೋತಿಗಳ ಭಾಷೆಗಳಲ್ಲಿಯೂ ಇರಬಹುದಾದಂತಹವು, ಆದರೆ ಉಳಿದ ನಾಲ್ಕು ಗುಣಗಳು ಮಾನವ ಭಾಷೆಗಳಲ್ಲಿ ಮಾತ್ರ ಇರುತ್ತವೆ ಮತ್ತು ಇವುಗಳು ಮಾನವ ಭಾಷೆಯ ವಿಶಿಷ್ಟ ಸಾಮರ್ಥ್ಯಕ್ಕೆ ಕಾರಣವಾಗಿವೆ. ಆದಾಗ್ಯೂ ಅವರು ಆ ಎಲ್ಲಾ 13 ವೈಶಿಷ್ಟ್ಯಗಳನ್ನು ಭಾಷೆಯ ವಿನ್ಯಾಸದ ವೈಶಿಷ್ಟ್ಯಗಳು ಎಂದು ಕರೆದರು. ಎಲ್ಲಾ ಮಾನವ ಭಾಷೆಗಳು ಸ್ವಲ್ಪಮಟ್ಟಿಗೆ ಇಂತಹ ಗುಣಗಳನ್ನು ಹೊಂದಿವೆ. ಆದರೆ ಈ ನಾಲ್ಕು ಪ್ರಮುಖ ಗುಣಗಳು ಮಾನವ ಭಾಷೆಯನ್ನು ಶ್ರೀಮಂತ ಮತ್ತು ಶಕ್ತಿಯುತವಾಗಿಸುತ್ತವೆ, ಅದು ಯಾವುದೇ ಪ್ರಾಣಿಯ ಭಾಷೆಯಲ್ಲಿಲ್ಲ. ಹಾಕೆಟ್‌ನ ಆರಂಭಿಕ ವ್ಯಾಖ್ಯಾನದ ಪ್ರಕಾರ ಮಾನವ ಭಾಷೆಗಳು ಈ ವಿಶಿಷ್ಟ ಗುಣಲಕ್ಷಣಗಳನ್ನು ಹೊಂದಿವೆ: ವೈವಿಧ್ಯತೆ, ಸ್ಥಳಾಂತರ, ಉತ್ಪಾದಕತೆ ಮತ್ತು ಸಾಂಸ್ಕೃತಿಕ ವರ್ಗಾವಣೆ. ಈ ನಾಲ್ಕು ಗುಣಗಳೊಂದಿಗೆ ನಂತರದಲ್ಲಿ ಇನ್ನೂ ಕೆಲವು ವಿಲಕ್ಷಣಗಳನ್ನು ಸೇರಿಸಲಾಗಿದೆ. ಹಾಕೆಟ್ ಇವುಗಳಲ್ಲಿ ಮೂರನ್ನು ನಂತರ ಸೇರಿಸಿದರು. ಆದಾಗ್ಯೂ ಹಲವು ವಿದ್ವಾಂಸರು ಈ ಗುಣಗಳು ಮತ್ತು ವಿಲಕ್ಷಣಗಳನ್ನು ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಆದರೆ ಅವು ಮಾನವ ಭಾಷೆಯ ವಿಶೇಷ ಗುಣಲಕ್ಷಣಗಳಾಗಿವೆ ಎಂದು ಅವರು ಏಕೆ ಭಾವಿಸುತ್ತಾರೆ ಮತ್ತು ಅವು ಏಕೆ ಮುಖ್ಯವಾಗಿವೆ ಎಂಬುದನ್ನು ನಾವು ಮುಂದೆ ನೋಡುತ್ತೇವೆ.

## ಮಾದರಿಗಳ ದ್ವಿವಿಧತೆ (Duality of Patterning)

ಇಂದಿನ ಬಹುಪಾಲು ಜನರಿಗೆ ಬಹಳಷ್ಟು ಸಮಯ ಮಾತೇ ಭಾಷೆಯ ಮಾಧ್ಯಮವಾಗಿದೆ. ನಾವು ಈಗಿನ ಭಾಷೆಯ ರೂಪವನ್ನು ಹೇಗೆ ತಲುಪಿದ್ದೇವೆ ಎಂಬುದು ಬೇರೆಯದೇ ಕಥೆ. ಈಗ ನಾವು ಮಾತಿನ ಮೇಲೆ ಆಧಾರಿತ ಭಾಷೆಯ ಬಗ್ಗೆ ಮಾತನಾಡುತ್ತೇವೆ (ಸಂಕೇತ ಭಾಷೆಯನ್ನು ಬಳಸುವವರಿಗೆ ಚಿಹ್ನೆಗಳು ಭಾಷೆಯ ಮುಖ್ಯ ಮಾಧ್ಯಮವಾಗಿವೆ). ಮಾತನಾಡಲು, ನಾವು ಶ್ವಾಸಕೋಶದಿಂದ ಬರುವ ಗಾಳಿಯನ್ನು ಹೊರಹಾಕುತ್ತೇವೆ ಮತ್ತು ಅದೇ ಸಮಯದಲ್ಲಿ, ನಾವು ನಮ್ಮ ಬಾಯಿಯ ವಿವಿಧ ಭಾಗಗಳನ್ನು ವಿಭಿನ್ನ ರೀತಿಯಲ್ಲಿ ಅಲುಗಾಡಿಸುತ್ತೇವೆ ಮತ್ತು ಹೀಗೆ ಮಾತನಾಡುವುದಕ್ಕಾಗಿ ಧ್ವನಿಗಳನ್ನು ಉತ್ಪಾದಿಸುತ್ತೇವೆ- ಇದರಲ್ಲಿ ಸ್ವರಗಳು ಮತ್ತು ವ್ಯಂಜನಗಳಿವೆ. ನಮ್ಮ ಪ್ರತಿ ಹೇಳಿಕೆಯಲ್ಲಿ ಧ್ವನಿಗಳ ಒಂದು ಕ್ರಮವಿರುತ್ತದೆ. ನಾವು ಎಷ್ಟು ಧ್ವನಿಗಳನ್ನು ಮಾಡಬಹುದು ಎಂಬುದಕ್ಕೆ ಯಾವುದೇ ನೇರ ಉತ್ತರವಿಲ್ಲ. ಏಕೆಂದರೆ ಉತ್ತರವು ನಾವು ಧ್ವನಿಗಳ ನಡುವೆ ಎಷ್ಟು ವ್ಯತ್ಯಾಸವನ್ನು ಬಯಸುತ್ತೇವೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ, ಆದರೆ ಈ ಶಬ್ದಗಳ ಸಂಖ್ಯೆಯು ಖಂಡಿತವಾಗಿಯೂ ಹೆಚ್ಚಿನದಲ್ಲ. ನೀವು ಧ್ವನಿವಿಜ್ಞಾನದಲ್ಲಿ ಯಾವುದೇ ವಿಶೇಷ ತರಬೇತಿಯನ್ನು ಹೊಂದಿಲ್ಲದಿದ್ದರೆ, 100 ಸ್ವತಂತ್ರ ಧ್ವನಿಗಳನ್ನು ಸಹ ಉತ್ಪಾದಿಸಲು ನಿಮಗೆ ಕಷ್ಟವಾಗುತ್ತದೆ (ಇಲ್ಲಿ ನಾವು 100 ಬೇರೆ ಬೇರೆ, ಸ್ವತಂತ್ರ ಧ್ವನಿಗಳ ಕುರಿತು ಮಾತನಾಡುತ್ತಿದ್ದೇವೆ ಒಂದಕ್ಕಿಂತ ಹೆಚ್ಚು ಧ್ವನಿ ತುಣುಕುಗಳನ್ನು ಒಟ್ಟುಗೂಡಿಸಿ ರಚಿಸಿದ ಶಬ್ದ ಅಂದರೆ ಕ್ರಮಬದ್ಧಗೊಳಿಸಿದ ಧ್ವನಿಗಳ ಕುರಿತು ಅಲ್ಲ.) ವಾಸ್ತವವಾಗಿ ಪ್ರತಿಯೊಂದು ಮಾನವ ಭಾಷೆಯು ಬಹಳ ಸೀಮಿತ ಸಂಖ್ಯೆಯ ಶಬ್ದಗಳನ್ನು ಬಳಸುತ್ತದೆ. ಇಂಗ್ಲಿಷ್ ಮತ್ತು ಹಿಂದಿಯ ಕೆಲವು ಉದಾಹರಣೆಗಳನ್ನು ನೋಡೋಣ- pat (ಪ್ಯಾಟ್) ಪದವನ್ನು ನೋಡಿ (ಇಂದಿನ ಇಂಗ್ಲಿಷ್‌ನಲ್ಲಿ ನೀವು cat (ಬೆಕ್ಕು) ಮತ್ತು kite (ಗಾಳಿಪಟ) ನಂತಹ ಒಂದೇ ಧ್ವನಿಯನ್ನು ಪ್ರತಿನಿಧಿಸುವ c ಮತ್ತು k ಈ ಎರಡು ಅಕ್ಷರಗಳನ್ನು ಕಾಣಬಹುದು, ಇಲ್ಲಿ c ಮತ್ತು k ಕ್ರಮವಾಗಿ ಒಂದೇ ಧ್ವನಿಯನ್ನು ಹೊಂದಿವೆ. (ಇಂತಹ ಸಂದರ್ಭದಲ್ಲಿ ಇಂಗ್ಲಿಷ್ ಸ್ವಲ್ಪ ಕಡಿಮೆ ವಿಶ್ವಾಸಾರ್ಹವಾಗಿದೆ) ಆದರೆ ಪ್ಯಾಟ್ ಅನ್ನು ಹಾಗೆ ಬರೆಯಲಾಗಿಲ್ಲ. ಇದು ಮೂರು ವಿಭಿನ್ನ ಶಬ್ದಗಳನ್ನು ಹೊಂದಿದೆ, 'p' 'a' ಮತ್ತು 't'. ನಾವು ಸ್ವತಂತ್ರ ಶಬ್ದಗಳನ್ನು \p\, \æ\, \t\ ಎಂದು ಸೂಚಿಸುತ್ತೇವೆ. ಮಾತನಾಡುವಲ್ಲಿ ಬಳಸುವ ಈ ವಿಭಿನ್ನ ಶಬ್ದಗಳನ್ನು ಭಾಷೆಯ ಧ್ವನಿಮಾಗಳು (phonemes) ಎಂದು ಕರೆಯಲಾಗುತ್ತದೆ.

ಈಗ ಯಾರಾದರೂ pat ಪದದ ಅರ್ಥವೇನು ಎಂದು ಕೇಳಿದರೆ ನಮಗೆ ಉತ್ತರಿಸಲು ಯಾವುದೇ ತೊಂದರೆಯಾಗುವುದಿಲ್ಲ ಆದರೆ ಯಾರಾದರೂ \p\ ಅಥವಾ \ æ\ ಎಂದರೆ ಏನು ಎಂದು ಕೇಳಿದರೆ ನಾವು ಅದರ ಅರ್ಥವನ್ನು ಹೇಳಲು ಸಾಧ್ಯವಾಗುವುದಿಲ್ಲ (ಇದೊಂದು ಮಾತನಾಡುವಾಗ ನಾವು ಬಳಸುವ ಧ್ವನಿ ಎಂದು ಹೇಳಬಹುದಷ್ಟೇ). ಕೆಲವು ಫೊನೀಮ್ಗಳು ಸ್ವತಂತ್ರ ಅರ್ಥಗಳನ್ನು ಹೊಂದಿರಬಹುದು, ಆದರೆ ಇದು ಅಪರೂಪ. ಅದೇ ರೀತಿ, ಇತರ ಧ್ವನಿಮಾ (phonemes) ಗಳಿಗೂ ಯಾವುದೇ ಅರ್ಥವಿಲ್ಲ.

ಇದು ಹಿಂದಿ ಅಥವಾ ಇತರ ಭಾಷೆಗಳಿಗೂ ಅನ್ವಯಿಸುತ್ತದೆ. ಉದಾಹರಣೆಗೆ, ಹಿಂದಿಯ ಈ ಪದವನ್ನು ನೋಡಿ - ಕಪಟ್ (ಕಪಟ). ಇದು ಐದು ಶಬ್ದಗಳನ್ನು ಹೊಂದಿದೆ \ಕ್\, \ಅ\, \ಪ್\, \ಅ\, \ಟ್\ (ಅ ಧ್ವನಿಯು ಕ್ ಮತ್ತು ಪ್ ಗೆ ಸೇರುತ್ತದೆ). ನಾವು ಇಂಗ್ಲಿಷ್ ಉದಾಹರಣೆಯಲ್ಲಿ ನೋಡಿದಂತೆ, ಇಲ್ಲಿಯೂ ನಮಗೆ ಕಪಟ್ (ಕಪಟ) ಪದದ ಅರ್ಥ ತಿಳಿದಿದೆ ಆದರೆ ದರಲ್ಲಿನ ಬಿಡಿ ಶಬ್ದಗಳ ಅರ್ಥವನ್ನು ನಾವು ಹೇಳಲಾಗುವುದಿಲ್ಲ.

ಆದಾಗ್ಯೂ, ಈ ಎರಡೂ ಉದಾಹರಣೆಗಳಲ್ಲಿ ಒಂದು ವಿಷಯವನ್ನು ಗಮನಿಸುವುದು ಸಮಂಜಸವಾಗಿದೆ. ಅಂದರೆ, pat ನಿಂದ tap ಮತ್ತು apt ನಿಂದ at ನಂತಹ ಹೊಸ ಪದಗಳನ್ನು ರೂಪಿಸಲು ನಾವು ಈ ಅರ್ಥಹೀನ ಧ್ವನಿಮಾ (phonemes) ಗಳನ್ನು ಬೇರೆ ಬೇರೆ ರೀತಿಯಲ್ಲಿ ಮರುಹೊಂದಿಸಬಹುದು.

ಅದೇ ರೀತಿ ಹಿಂದಿಯ ಶಬ್ದಗಳನ್ನು ಮರುಹೊಂದಿಸಿ ಪಟಾಕ್, ತಪ್ಕಾ, ಪಾಕ್, ಪಟ್, ಕಾಪ್ ಮುಂತಾದ ಪದಗಳನ್ನು ಮಾಡಬಹುದು. ಮತ್ತು \ಈ\ ಎಂದು ಇನ್ನೂ ಒಂದು ಶಬ್ದವನ್ನು ಸೇರಿಸಿದರೆ ನಮಗೆ ಪಟ್ಕೀ, ಟಪ್ಕೀ, ಕಟೀ, ಪಾಕೀ, ಪಟೀ, ಕೀ, ಪೀ ಇತ್ಯಾದಿ ಇನ್ನೂ ಅನೇಕ ಪದಗಳು ಕಂಡುಬರುತ್ತವೆ. ಈ ಪದಗಳ ಪಟ್ಟಿಯನ್ನು ಮಾಡಲು ಪ್ರಯತ್ನಿಸುವುದು

ಆಸಕ್ತಿದಾಯಕವಾಗಿದೆ. ಅಂತೆಯೇ, ಅಂತಹ ಅನೇಕ ಉದಾಹರಣೆಗಳು ಇತರ ಭಾಷೆಗಳಲ್ಲಿಯೂ ಕಂಡುಬರುತ್ತವೆ ಏಕೆಂದರೆ ಈ ವಿಶೇಷತೆಯು ಮಾನವ ಭಾಷೆಗಳಲ್ಲಿದೆ ಮತ್ತು ಹಿಂದಿ ಮತ್ತು ಇಂಗ್ಲಿಷ್ ಅಲ್ಲ. ಬೇರೆ ರೀತಿಯಲ್ಲಿ ಹೇಳುವುದಾದರೆ, ಪ್ರತಿಯೊಂದು ಭಾಷೆಯು ಅಪಾರ ಸಂಖ್ಯೆಯ ಅರ್ಥಪೂರ್ಣ ಪದಗಳನ್ನು ಹೊಂದಿದೆ, ಅಂದರೆ ಶಬ್ದಗಳನ್ನು ವಿಭಿನ್ನ ರೀತಿಯ ಸಂಯೋಜನೆಗಳಲ್ಲಿ ಜೋಡಿಸಲಾಗಿದೆ. ಎಲ್ಲ ಮಾನವ ಭಾಷೆಗಳನ್ನು ಇದೇ ರೀತಿಯಲ್ಲಿ ನಿರ್ಮಿಸಲಾಗಿದೆ, ಮತ್ತು ಈ ಮಾದರಿಯನ್ನು duality of patterning (ವಿನ್ಯಾಸದಲ್ಲಿನ ದ್ವಿವಿಧತೆ) ಅಥವಾ ಸಂಕ್ಷಿಪ್ತವಾಗಿ ದ್ವಿವಿಧತೆ ಎಂದು ಕರೆಯಲಾಗುತ್ತದೆ.

ದ್ವಿವಿಧತೆ ಎಂದರೆ ಸೀಮಿತ ಸಂಖ್ಯೆಯ ಲಭ್ಯವಿರುವ ಅರ್ಥಹೀನ ಅಂಶಗಳನ್ನು ಸಂಯೋಜಿಸಿ ಬಹಳ ದೊಡ್ಡ ಸಂಖ್ಯೆಯ ಅರ್ಥಪೂರ್ಣ ಪದಗಳನ್ನು ಉತ್ಪಾದಿಸುವುದು. ಇದು ಬಹಳ ಮುಖ್ಯವಾದ ಔನ್ಯಾಸವಾಗಿದೆ, ಏಕೆಂದರೆ ಮಾನವರು ಹೊಸ ಪದಗಳನ್ನು ರೂಪಿಸಲು ಸಂಯೋಜಿಸುವ ಈ ಅರ್ಥಹೀನ ಧ್ವನಿ ಘಟಕಗಳನ್ನು ಹೊಂದಿಲ್ಲದಿದ್ದರೆ, ಅಥವಾ ತಮ್ಮದೇ ಆದ ಸ್ವತಂತ್ರ ಅರ್ಥವನ್ನು ಹೊಂದಿರುವ ಘಟಕಗಳು ಮಾತ್ರ ಇದ್ದರೆ, ಆಗ ನಮ್ಮಲ್ಲಿ ಅಷ್ಟು ದೊಡ್ಡ ಪದಗಳ ಸಂಗ್ರಹವೇ ಇರುತ್ತಿರಲಿಲ್ಲ. ಅಂತಹ ಜೋಡಣೆಯ ಫಲಿತಾಂಶವೆಂದರೆ ಶಬ್ದಗಳ ಸಂಖ್ಯೆ ಮತ್ತು ಅರ್ಥಗಳ ಸಂಖ್ಯೆಗಳ ನಡುವೆ ಯಾವುದೇ ವ್ಯತ್ಯಾಸವಿರುತ್ತಿರಲಿಲ್ಲ, ನಾವು ಶಬ್ದಗಳಂತೆಯೇ ಅನೇಕ ಅರ್ಥಗಳನ್ನು ಹೊಂದಿದ್ದೇವೆ. ಮತ್ತು ಮೇಲೆ ಹೇಳಿದಂತೆ, ಇಂದಿನ ಎಲ್ಲಾ ಭಾಷೆಗಳನ್ನು ಸೇರಿಸಿದರೆ, ನಮ್ಮಲ್ಲಿ ಇನ್ನೂ 100 ಕ್ಕಿಂತ ಹೆಚ್ಚು ಶಬ್ದಗಳಿಲ್ಲ, ಅಥವಾ ನಮ್ಮ ಭಾಷೆಗಳು 100 ಕ್ಕಿಂತ ಹೆಚ್ಚು ಶಬ್ದಗಳನ್ನು ಹೊಂದಿಲ್ಲ. ಸ್ವಲ್ಪ ಯೋಚಿಸಿ, ಹಿಂದಿಯಲ್ಲಿ ಕೇವಲ 100 ಪದಗಳಿದ್ದರೆ ಅದು ಹೇಗೆ ಕೆಲಸ ಮಾಡುತ್ತಿತ್ತು? ಇಷ್ಟೊಂದು ಹೇಳಿಕೆಗಳನ್ನು ನಾವು ಹೇಳುತ್ತಿದ್ದುದಾದರೂ ಹೇಗೆ? ವಿಜ್ಞಾನ, ಇತಿಹಾಸ, ಗಣಿತ, ಮಾನವಿಕ ವಿಷಯಗಳಂತಹ ವಿಷಯಗಳನ್ನು ರಚಿಸಲು ನಮಗೆ ಸಾಧ್ಯವಾಗುತ್ತಿತ್ತೇ? ನಾವು ಮಕ್ಕಳಿಗೆ ಸಿಂಹ, ರಾಕ್ಷಸ, ರಾಕ್ಷಸ, ಕಾಲ್ಪನಿಕ ಕಥೆಗಳನ್ನು ಹೇಳಲು ಸಾಧ್ಯವೇ? ಭಾಷೆ, ತತ್ವಶಾಸ್ತ್ರ ಇತ್ಯಾದಿಗಳ ಬಗ್ಗೆ ಪುಸ್ತಕಗಳನ್ನು ಬರೆಯಲು ನಮಗೆ ಸಾಧ್ಯವಾಗುತ್ತಿತ್ತೇ? ಅದಕ್ಕಿಂತ ಹೆಚ್ಚಾಗಿ, ನಾವು ಹಲವಾರು ವಿಭಿನ್ನ ಭಾಷೆಗಳನ್ನು ಹೊಂದಲು ಸಾಧ್ಯವಿತ್ತೇ? ಏಕೆಂದರೆ ಬೇರೆ ಬೇರೆ ಭಾಷೆಗಳಲ್ಲಿನ ಅನೇಕ ಶಬ್ದಗಳು ಒಂದೇ ಆಗಿರುತ್ತವೆ, ಆದರೆ ಅವುಗಳನ್ನು ವ್ಯವಸ್ಥಿತವಾಗಿ ಜೋಡಿಸುವುದರಿಂದ ಅಸಂಖ್ಯಾತ ಹೊಸ ಪದಗಳನ್ನು ಸೃಷ್ಟಿಸುತ್ತೇವೆ.

ದ್ವಿವಿಧತೆಯ ಸಂದರ್ಭದಲ್ಲಿ ಮತ್ತೊಂದು ಪ್ರಮುಖ ಅಂಶವೆಂದರೆ ಪ್ರಪಂಚದ ಯಾವುದೇ ಇತರ ಪ್ರಭೇದದ ಭಾಷೆಯು ಈ ಗುಣವನ್ನು ಹೊಂದಿಲ್ಲ. ಇದು ಮಾನವ ಭಾಷೆಯ ವಿಶಿಷ್ಟ ಸಾಮರ್ಥ್ಯವಾಗಿದೆ (ಪಕ್ಷಿಗಳು ಮತ್ತು ತಿಮಿಂಗಿಲಗಳ ಹಾಡುಗಳಲ್ಲಿ ದ್ವಿವಿಧತೆಯ ಕೆಲವು ಅಂಶಗಳಿವೆ, ಆದರೆ ಅವುಗಳನ್ನು ಪರಿಪೂರ್ಣ ಸಂಕೇತ ವ್ಯವಸ್ಥೆ ಎಂದು ಹೇಳಲಾಗುವುದಿಲ್ಲ). ಇತರ ಪ್ರಾಣಿಗಳ ಸಂಕೇತ ವ್ಯವಸ್ಥೆಯಲ್ಲಿ ಶಬ್ದವು ಅದೇ ಅರ್ಥವನ್ನು ಹೊಂದಿದೆ. ಉದಾಹರಣೆಗೆ, ಒಂದು ಪ್ರದೇಶದ ಮೇಲೆ ಅಧಿಕಾರವನ್ನು ಪ್ರತಿಪಾದಿಸುವ ಧ್ವನಿ, ಅಪಾಯವನ್ನು ತಿಳಿಸುವ ಧ್ವನಿ, ನೀರಿನ ಲಭ್ಯತೆ ಅಥವಾ ಒಬ್ಬರ ಸಂತತಿಯ ಗುರುತನ್ನು ಸೂಚಿಸಲು ಒಂದು ವಿಶಿಷ್ಟವಾದ ಧ್ವನಿ. ಕೆಲವು ಜಾತಿಗಳಲ್ಲಿ ಈ ಶಬ್ದಗಳ ಸಂಖ್ಯೆ ಮೂರರಿಂದ ಆರರ ನಡುವೆ ಇರುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ವರ್ವಾಟ್ ಜಾತಿಯ ಕೋತಿಗಳಲ್ಲಿ ಸಾಮಾನ್ಯವಾಗಿ 20 ಶಬ್ದಗಳು ಕಂಡುಬರುತ್ತವೆ. ನಾವು ನಂತರ ಚರ್ಚಿಸುವ ಮಾನವ ಭಾಷೆಯ ಇತರ ಕೆಲವು ಗುಣಲಕ್ಷಣಗಳು ಮಾನವ ಭಾಷೆಯಲ್ಲಿ ದ್ವಿವಿಧತೆ ಇರುವುದರಿಂದ ಮಾತ್ರ ಸಾಧ್ಯ.

ಈಗ ನಾವು ಹಿಂದಿಯಲ್ಲಿ ಧ್ವನಿಮಾ (phonemes) ಗಳ ಸಂಖ್ಯೆಯನ್ನು ನೋಡಿದರೆ, ಅದು 52 ಆಗಿದೆ. ಆದರೆ ಪ್ರತಿ ಹಿಂದಿ ಮಾತನಾಡುವವರು ಒಂದೇ ರೀತಿಯ ಶಬ್ದಗಳನ್ನು ಬಳಸುವ ಅಗತ್ಯವಿಲ್ಲದ ಕಾರಣ ಈ ಸಂಖ್ಯೆ ಬದಲಾಗಬಹುದು. ಉದಾಹರಣೆಗೆ, ನೀವು 'ಶಕ್ಕರ್', 'ಷಕ್ಕರ್' ಮತ್ತು 'ಸಕ್ಕರ್'ಗಳ (ಸಕ್ಕರೆ ಎಂಬ ಅರ್ಥವನ್ನು ಸೂಚಿಸಲು ಬಳಸುವ ಬೇರೆ ಬೇರೆ ಪದಗಳು) ನಡುವೆ ವ್ಯತ್ಯಾಸವನ್ನು ಮಾಡಿದರೆ ನೀವು ಈ ಮೂರು ವಿಭಿನ್ನ ಶಬ್ದಗಳನ್ನು ಹೊಂದಿದ್ದೀರಿ ಎಂದರ್ಥ. ಆದರೆ ಈ ವ್ಯತ್ಯಾಸವನ್ನು ಮಾಡದವರು ಒಂದು ಅಥವಾ ಎರಡು ಕಡಿಮೆ ಶಬ್ದಗಳನ್ನು ಹೊಂದಿರುತ್ತಾರೆ. ಇವುಗಳಲ್ಲದೆ ಬೇರೆ ಕೆಲವು ಶಬ್ದಗಳನ್ನು ಹೊಂದಿರಬಹುದು. ನಾವು 'ಶ', 'ಷ' ಮತ್ತು 'ಸ' ಈ ಮೂರು ಶಬ್ದಗಳನ್ನು ಸುಲಭವಾಗಿ ಬಳಸಲು ಸಾಧ್ಯವಾದರೆ, ನಾವು ಸುಲಭವಾಗಿ ಮಾಡುವ ಈ ಕಾರ್ಯವನ್ನು ಇತರ ಅನೇಕ ಜನರು ಏಕೆ ಮಾಡಲು ಅಥವಾ ಈ ವ್ಯತ್ಯಾಸವನ್ನು ನೋಡಲು ಅಥವಾ ಅನುಭವಿಸಲು ಸಾಧ್ಯವಾಗುವುದಿಲ್ಲ ಎಂಬುದನ್ನು ನಾವು ಅರ್ಥಮಾಡಿಕೊಳ್ಳಬಹುದು. ಮತ್ತು ಇದು ಇತರ ಶಬ್ದಗಳ ಸಂದರ್ಭದಲ್ಲಿ ನಮಗೂ ಹಾಗೆಯೇ ಅಗಬಹುದು. ಉದಾಹರಣೆಗೆ ಸಂಸ್ಕೃತ ಮಾತನಾಡುವವರು 'ಋತು' ಮತ್ತು 'ರಿತು' ನಡುವೆ

ವ್ಯತ್ಯಾಸೀಕರಿಸಬಹುದು. ಆದರೆ ಬಹುಶಃ ಇಂದು ಹೆಚ್ಚಿನ ಜನರು ಈ ವ್ಯತ್ಯಾಸವನ್ನು ತಿಳಿದಿರುವುದಿಲ್ಲ. ಅದೇ ರೀತಿ, ಇಂಗ್ಲಿಷ್ ಮಾತನಾಡುವವರು special (ಸ್ಪೆಶಲ್) ಮತ್ತು spatial (ಸ್ಪೇಶಿಯಲ್) ಪದಗಳ ನಡುವಿನ ಉಚ್ಚಾರದ ವ್ಯತ್ಯಾಸವನ್ನು ಅನುಭವಿಸಬಹುದು ಹಾಗೂ ಅದನ್ನು ಬೇರೆಯವರು ಅನುಭವಿಸದಿರಬಹುದು.

ಎಲ್ಲ ಭಾಷೆಗಳಲ್ಲಿ ಧ್ವನಿಮಾಗಳ ಸಂಖ್ಯೆ ವಿಭಿನ್ನವಾಗಿದೆ. ಕೆಲವು ಆಫ್ರಿಕನ್ ಭಾಷೆಗಳಲ್ಲಿ ಈ ಸಂಖ್ಯೆಯು 100 ಕ್ಕಿಂತ ಹೆಚ್ಚಿದೆ ಮತ್ತು ಕೆಲವು ಇತರರಲ್ಲಿ ಕೇವಲ 10 (ಉದಾ, ಬ್ರೆಜಿಲಿಯನ್ ಭಾಷೆಯ ಪಿರಾಹಾ ಕೇವಲ 10 ಶಬ್ದಗಳನ್ನು ಹೊಂದಿದೆ- ಏಳು ವ್ಯಂಜನಗಳು ಮತ್ತು ಮೂರು ಸ್ವರಗಳು). ಈ ಸಂಖ್ಯೆಯು ಯಾವುದೇ ಭಾಷೆಯಲ್ಲಿ ಸರಾಸರಿ ಸುಮಾರು 25 ಆಗಿದೆ. ಹಿಂದಿಯಲ್ಲಿ ಇದು 52 ಆಗಿದೆ. ಆದರೆ ಈ ಸಂಖ್ಯೆಗಳನ್ನು ಮೀರಿ, ಪ್ರತಿಯೊಂದು ಮಾನವ ಭಾಷೆಯು ಮಾದರಿಯ ದ್ವಿವಿಧತಾ ಸಂರಚನಾ ನಿಯಮದ ಮೇಲೆ ನಿರ್ಮಿಸಲ್ಪಟ್ಟಿದೆ, ಈ ವಿನ್ಯಾಸವನ್ನು ಮನುಷ್ಯರು ಮಾತ್ರ ಈ ಜಗತ್ತಿನಲ್ಲಿ ಹೊಂದಿದ್ದಾರೆ ಮತ್ತು ಅದಿಲ್ಲದೆ ಮಾನವ ಭಾಷೆಯು ಇಂದು ಇರುವ ರೀತಿಯಲ್ಲಿ ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ.

ಭಾಷೆಯ ಮುಖ್ಯ ಗುಣವನ್ನು ಸಂಕ್ಷಿಪ್ತವಾಗಿ ವ್ಯಕ್ತಪಡಿಸುವುದಾದಲ್ಲಿ ಅದು ಅರ್ಥಪೂರ್ಣ ವಾಕ್ಯಗಳಿಂದ ರೂಪುಗೊಂಡ ಅರ್ಥಪೂರ್ಣ ಸಂಭಾಷಣೆಯಾಗಿದೆ. ಈ ಅರ್ಥಪೂರ್ಣ ವಾಕ್ಯಗಳು ವಿಭಿನ್ನ ಸಣ್ಣ ಮತ್ತು ದೊಡ್ಡ ಆದರೆ ಅರ್ಥಪೂರ್ಣ ಘಟಕ (ಶಬ್ದ ಹಾಗೂ ಧ್ವನಿಮಾ) ಗಳಿಂದ ಮಾಡಲ್ಪಟ್ಟಿವೆ. ಈ ಅರ್ಥಪೂರ್ಣ ಘಟಕಗಳು ಇತರ ಸಣ್ಣ ಅರ್ಥಹೀನ ಘಟಕಗಳಿಂದ ಮಾಡಲ್ಪಟ್ಟಿವೆ ಧ್ವನಿಮಾ (Phoneme) ಗಳನ್ನು ವಿಭಿನ್ನ ರೀತಿಯಲ್ಲಿ ಜೋಡಿಸಿ ನಾವು ಹೊಸ ಹೊಸ ಪದಗಳನ್ನು ಮಾಡಬಹುದು. ಈ ಪದಗಳನ್ನು ಅರ್ಥಪೂರ್ಣವಾಗಿ ಸಂಯೋಜಿಸುವ ಮೂಲಕ ವಾಕ್ಯಗಳು ರೂಪುಗೊಳ್ಳುತ್ತವೆ. ಪದಗಳಿಂದ ಹೊಸ ವಾಕ್ಯಗಳನ್ನು ರಚಿಸಬಹುದು. ವಾಕ್ಯಗಳ ಸಹಾಯದಿಂದ ನಾವು ಒಂದೇ ವಿಷಯವನ್ನು ಹಲವು ರೀತಿಯಲ್ಲಿ ಹೇಳಬಹುದು. ಅನೇಕ ಭಾಷೆಗಳಲ್ಲಿ ಒಂದು ವಾಕ್ಯವನ್ನು ಹಲವು ರೀತಿಯಲ್ಲಿ ಬರೆಯುವ ಸ್ವಾತಂತ್ರ್ಯವಿದೆ. ಇದರರ್ಥ ವಾಕ್ಯಗಳ ತುಣುಕುಗಳನ್ನು ಹೊಸ ರೂಪಗಳನ್ನು ರೂಪಿಸಲು ನಿಯಮಗಳು ಮತ್ತು ನಿಬಂಧನೆಗಳ ಅಡಿಯಲ್ಲಿ ವಿಭಿನ್ನ ರೀತಿಯಲ್ಲಿ ಸಂಯೋಜಿಸಬಹುದು. ಆದರೆ ಪದಗಳನ್ನು ರೂಪಿಸುವ ಕೆಲಸವು ಧ್ವನಿಯ ತುಣುಕುಗಳೊಂದಿಗೆ ಪ್ರಾರಂಭವಾಗುತ್ತದೆ. ಶಬ್ದದ ತುಣುಕುಗಳು ಒಟ್ಟಿಗೆ ಸೇರಿ ಉಚ್ಚಾರಾಂಶಗಳನ್ನು ರೂಪಿಸುತ್ತವೆ. ಉಚ್ಚಾರಾಂಶಗಳು ಮತ್ತು ರೂಪಿಮಾ ಅಥವಾ ಪದಾಕೃತಿ (morphemes) ಗಳನ್ನು ಸಂಯೋಜಿಸುವ ಮೂಲಕ ಪದಗಳು ರೂಪುಗೊಳ್ಳುತ್ತವೆ ಮತ್ತು ನಂತರ ಅವುಗಳಿಂದ ವಾಕ್ಯಗಳನ್ನು ರಚಿಸಲಾಗುತ್ತದೆ. ಹೀಗೆ ಭಾಷೆಯ ನಿರ್ಮಾಣವನ್ನು ಎರಡು ಹಂತಗಳಲ್ಲಿ ಕಾಣಬಹುದು. ಮೊದಲ ಹಂತವೆಂದರೆ ಅರ್ಥಹೀನ ಶಬ್ದಗಳು. ಅರ್ಥಪೂರ್ಣ ಸಂಭಾಷಣೆಯ ಭಾಷೆಯ ಸಣ್ಣ ತುಣುಕುಗಳನ್ನು ನೀವು ನೋಡಿದರೆ, ಅದು ಅರ್ಥಹೀನ ಶಬ್ದಗಳ ಸಂಯೋಜನೆಯಿಂದ ಮಾಡಲ್ಪಟ್ಟಿದೆ ಎಂದು ನೀವು ಕಂಡುಕೊಳ್ಳುತ್ತೀರಿ. ಈ ಅರ್ಥಹೀನ ಶಬ್ದಗಳ ಸಂಖ್ಯೆ ಸೀಮಿತವಾಗಿದೆ. ಆದರೆ ಅದರ ಎರಡನೇ ಹಂತದಲ್ಲಿ ಅರ್ಥಪೂರ್ಣ ತುಣುಕುಗಳಾಗಿ ನಿರ್ಮಿಸಲಾದ ವ್ಯವಸ್ಥೆಯಾಗಿ, ಅದು ಅಸಂಖ್ಯಾತ ಪದಗಳು ರಚನೆಯಾಗುತ್ತವೆ. ಶಬ್ದ ಅಥವಾ ಮಾರ್ಫೀಮ್‌ಗಳ ಸಂಯೋಜನೆಯಿಂದ ಪದಗಳು ರಚನೆಗೊಳ್ಳುತ್ತವೆ. ಈ ಗುಣವು ಮಾನವ ಭಾಷೆಯಲ್ಲಿ ಮಾತ್ರ ಕಂಡುಬರುತ್ತದೆ. (ಇತ್ತೀಚೆಗೆ ಕೆಲವು ವಿಶಿಷ್ಟ ಜಾತಿಯ ಕೋತಿಗಳ ಭಾಷೆಯಲ್ಲಿ ಅಂತಹ ಧ್ವನಿ ಸಂಯೋಜನೆಗಳ ಕೆಲವು ಉದಾಹರಣೆಗಳಿವೆ, ಆದರೆ ಅವುಗಳು ಕೆಲವೇ ಜೋಡಿಗಳನ್ನು ಮಾತ್ರ ರಚಿಸಲು ಸಾಧ್ಯ). ಅಂದಹಾಗೆ, ಮಾನವ ಭಾಷೆಗಳ ಕೆಲವು ಧ್ವನಿ ತುಣುಕುಗಳು ಸಂಪೂರ್ಣವಾಗಿ ಅರ್ಥಹೀನವಲ್ಲ. ಆದರೆ ಮಂಗಗಳ ಭಾಷೆಯಲ್ಲಿ ಅಂತಹ ತುಣುಕುಗಳು ಮತ್ತು ಧ್ವನಿ ಸಂಯೋಜನೆಯ ಉದಾಹರಣೆಗಳ ಸಂಖ್ಯೆ ಬಹಳ ಕಡಿಮೆ. ಸ್ವತಂತ್ರ ಅರ್ಥವನ್ನು ಹೊಂದಿರುವ ಮಾನವ ಭಾಷೆಯಲ್ಲಿ ಬಹುಶಃ ಅಂತಹ ಧ್ವನಿಮಾಗಳು ಇಲ್ಲ, ಆದರೆ ಇತರ ಪದಗಳನ್ನು ರೂಪಿಸುವಲ್ಲಿ ಉಪಯೋಗಕ್ಕೆ ಬಾರದ ಯಾವುದೇ ಧ್ವನಿಮಾಗಳು ಇಲ್ಲ. ಇವುಗಳಲ್ಲಿ ಕಂಡುಬರುವ ಹೆಚ್ಚಿನ ಪದಗಳು ತಮ್ಮದೇ ಆದ ವಿಶೇಷ ನೋಟವನ್ನು ನೀಡುತ್ತವೆ ಮತ್ತು ಈ ಕಾರಣಕ್ಕಾಗಿ ಪದದ ಪ್ರಾರಂಭ ಅಥವಾ ಸಂಯೋಜನೆಯನ್ನು ನೋಡುವ ಮೂಲಕ ಆ ಪದವು ಏನೆಂದು ನಾವು ಅರ್ಥಮಾಡಿಕೊಳ್ಳುತ್ತೇವೆ. ಆಂಗ್ಲ ಭಾಷೆಯ un, pre, ir ಮತ್ತು ಹಿಂದಿಯಲ್ಲಿ 'ಅ', 'ಸು', 'ಗೈರ್' ನಂತಹ ಬಳಕೆ ಹೊಂದಿದ ಉದಾಹರಣೆಗಳು (ಅಸತ್ಯ, ಸುಲಲಿತ, ಗೈರ್-ಕಾನೂನೀ) ಹಾಗೂ ಒಂದೇ ರೀತಿಯ ಅಂತ್ಯ ಹೊಂದಿದ ಶಬ್ದಗಳು ಪದದ ಸ್ವರೂಪದ ಬಗ್ಗೆ ಹೇಳುತ್ತವೆ. ಇದೆಲ್ಲದರ ಆಧಾರದ ಮೇಲೆ ಭಾಷೆಯ ಬೆಳವಣಿಗೆ ಮತ್ತು ಹೆಚ್ಚುತ್ತಿರುವ ಸಂಕೀರ್ಣತೆಯೊಂದಿಗೆ ದ್ವಿವಿಧತೆಯೂ ಸ್ಪಷ್ಟವಾಗುತ್ತದೆ ಎನಿಸುತ್ತದೆ. (ಈ ದ್ವಿವಿಧತೆಯು ಸ್ವಲ್ಪಮಟ್ಟಿಗೆ ಉತ್ಪಾದಕತೆಯ ಹಾಗೆ ತೋರುತ್ತದೆ, ಆದರೆ

ಉತ್ಪಾದಕತೆಯು ಅರ್ಥಪೂರ್ಣವಾದ ತುಣುಕುಗಳನ್ನು ಸಂಯೋಜಿಸುವ ಮೂಲಕ ಹೊಸ ಅರ್ಥಗಳನ್ನು ರಚಿಸುವುದನ್ನು ಸೂಚಿಸುತ್ತದೆ, ಆದರೆ ದ್ವಿವಿಧತೆಯು ಸಣ್ಣ ಘಟಕಗಳನ್ನು ವಿಭಿನ್ನ ಕ್ರಮದಲ್ಲಿ ಸಂಯೋಜಿಸುವುದಕ್ಕೆ ಸಂಬಂಧಿಸಿದೆ).

**ಸ್ಥಳಾಂತರ (Displacement)**

ಸ್ಥಳಾಂತರ ಎಂದರೆ ಮನುಷ್ಯರು ತಮ್ಮ ಮುಂದೆ ಇಲ್ಲದ ವಿಷಯಗಳ ಬಗ್ಗೆ ಮಾತನಾಡಬಹುದು, ಈ ಸಂದರ್ಭದಲ್ಲಿ ಸಮಯ ಅಥವಾ ಸ್ಥಳದ ಮಿತಿಯಿಲ್ಲ. ಅಂದರೆ ಕೆಲವು ಶತಮಾನ ಅಥವಾ ವರ್ಷ ಅಥವಾ ತಿಂಗಳು ಅಥವಾ ದಿನ ಅಥವಾ ಕ್ಷಣಗಳ ಹಿಂದೆ ನಡೆದ ಸಂಗತಿಗಳ ಬಗ್ಗೆ ಮತ್ತು ಬೇರೆ ಯಾವುದಾದರೂ ಹಳ್ಳಿ, ನಗರ ಅಥವಾ ದೇಶದಲ್ಲಿ ಸಂಭವಿಸಿದ ಸಂಗತಿಗಳ ಬಗ್ಗೆ ಮಾತನಾಡುವ ಸಾಮರ್ಥ್ಯವನ್ನು ನೀವು ಹೊಂದಿದ್ದೀರಿ.

ಬೇರೆ ರೀತಿಯಲ್ಲಿ ಹೇಳುವುದಾದರೆ, ಪ್ರಸ್ತುತ ನಿಮ್ಮ ಮುಂದೆ ಇಲ್ಲದಿರುವ ವಿಷಯಗಳು ಅಥವಾ ನೀವು ಅವುಗಳನ್ನು ನೋಡಲು ಸಾಧ್ಯವಾಗದ ಅಥವಾ ಅಸ್ತಿತ್ವದಲ್ಲಿಲ್ಲದ ವಸ್ತುಗಳು, ಎಂದೂ ಇಲ್ಲದ ಹಾಗೂ ಎಂದಿಗೂ ಆಗದ- ಎಲ್ಲವನ್ನೂ ಭಾಷೆಯನ್ನು ಬಳಸುವ ಮೂಲಕ ಏನನ್ನಾದರೂ ಹೇಳಲು ಮತ್ತು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದನ್ನೇ ಭಾಷೆಯ ಸಂದರ್ಭದಲ್ಲಿ ಸ್ಥಳಾಂತರ. ಹಿಂದಿನ ದಿನದ ಕ್ರಿಕೆಟ್ ಪಂದ್ಯದ ಬಗ್ಗೆ ಮಾತನಾಡುವಲ್ಲಿ, ಸಾವಿರಾರು ವರ್ಷಗಳ ಹಿಂದೆ ಭಾಷೆ ಹೇಗೆ ವಿಕಸನಗೊಂಡಿತು, ಮಾನವ ಜೀವನ ಹೇಗೆ ಅಸ್ತಿತ್ವಕ್ಕೆ ಬಂದಿತು, ಅದು ಹೇಗೆ ವಿಕಸನಗೊಂಡಿತು, ಇನ್ನು ಸಾವಿರ ವರ್ಷಗಳ ನಂತರ ಏನಾಗಬಹುದು ಎಂಬಿತ್ಯಾದಿ ವಿಷಯಗಳ ಬಗ್ಗೆ ಮಾತನಾಡುವುದರಲ್ಲಿ ಯಾವುದೇ ಅಡೆತಡೆ ಉಂಟಾಗುವುದಿಲ್ಲ. ನಾವು ಯಾವುದೇ ಸ್ಥಳದ ಸಾಮಾಜಿಕ, ರಾಜಕೀಯ, ನೈಸರ್ಗಿಕ ಮತ್ತು ಸಾಂಸ್ಕೃತಿಕ ಜೀವನದ ಬಗ್ಗೆ ಅಥವಾ ಯಾವುದೇ ವಿಷಯದ ಬಗ್ಗೆ ನಾವು ಅಲ್ಲಿಗೆ ಹೋಗಿದ್ದರೂ ಅಥವಾ ಹೋಗಿಲ್ಲದಿದ್ದರೂ ಮಾತನಾಡಬಹುದು.

ವಕ್ತೃ ಅಥವಾ ಮಾತನಾಡುವವನು ಹಿಂದಿನ ಅಥವಾ ಭವಿಷ್ಯದ ಬಗ್ಗೆ ಅಥವಾ ತನ್ನ ಕನಸುಗಳು ಮತ್ತು ಭರವಸೆಗಳ ಬಗ್ಗೆ ಮಾತನಾಡಬಹುದು. ಮಾನವನ ಭಾಷೆ ಕೇವಲ ವರ್ತಮಾನದ ಬಗ್ಗೆ ಥವಾ ತನ್ನ ಮುಂದೆ ಇರುವುದರ ಬಗ್ಗೆ ಮಾತನಾಡಲು ಮಾತ್ರ ಸೀಮಿತವಾಗಿಲ್ಲ. ಸ್ಥಳಾಂತರವು ಮಾನವ ಭಾಷೆಯ ಗುಣಮಟ್ಟವಾಗಿದ್ದು ಅದನ್ನು ಇತರ ಪ್ರಾಣಿಗಳ ಭಾಷೆಯಿಂದ ಪ್ರತ್ಯೇಕಿಸುತ್ತದೆ. ಮಂಗಗಳ ಜಾತಿಗಳು ಕೆಲವು ಸಂದರ್ಭಗಳಲ್ಲಿ ಸ್ವಲ್ಪ ಮಟ್ಟಿಗೆ ಅದನ್ನು ಬಳಸಲು ಸಮರ್ಥವಾಗಿವೆ ಮತ್ತು ನಾವು ಅವುಗಳನ್ನು ಹಾಗೆ ಬಳಸಲು ಸಿದ್ಧಪಡಿಸಬಹುದಾಗಿದೆ, ಆದರೆ ಅದು ತಾತ್ಕಾಲಿಕವಾಗಿರುತ್ತದೆ. ಇದನ್ನು ಹೊರತುಪಡಿಸಿದರೆ ಜೇನುನೊಣಗಳಲ್ಲಿ ಈ ರಿತಿಯ ಸಂವಹನವನ್ನು ಕಾಣಬಹುದಾಗಿದೆ. ಅವು ಇತರ ಜೇನುನೊಣಗಳಿಗೆ ಜೇನುತುಪ್ಪವು ಎಲ್ಲಿದೆ ಎಂಬ ಮಾಹಿತಿಯನ್ನು ನೀಡಬಲ್ಲದು ಎಂದು ಕಂಡುಬಂದಿದೆ, ಆದರೆ ಈ ಸ್ಥಳಾಂತರದ ಗುಣವು ಇತರ ಪ್ರಾಣಿಗಳ ವ್ಯವಸ್ಥೆಯಲ್ಲಿಲ್ಲ.

**ಮುಕ್ತತೆ (Openness)**

ನಾವು ಏನು ಬೇಕಾದರೂ ಹೇಳಬಹುದಾದ ಸಾಮರ್ಥ್ಯ ಇದು. ಇವುಗಳಲ್ಲಿ ನಾವು ಹಿಂದೆಂದೂ ಹೇಳದ ಅಥವಾ ಕೇಳದ ವಿಷಯಗಳೂ ಸೇರಿವೆ. ಉದಾಹರಣೆಗೆ-

- ಮಹಾತ್ಮಾ ಗಾಂಧಿಯವರು 25 ಫೆಬ್ರವರಿ 2029 ರಂದು ಶಿಮ್ಲಾಗೆ ಭೇಟಿ ನೀಡುವ ಸಾಧ್ಯತೆಯಿದೆ.
- ರವೀಂದ್ರನಾಥ ಟ್ಯಾಗೋರ್ ತಮ್ಮ ಕಥೆಗಳನ್ನು ಮೇವಾರಿಯಲ್ಲಿ ಬರೆದರು ಮತ್ತು ನಂತರ ಅವುಗಳನ್ನು ಬಂಗಾಳಿ ಭಾಷೆಗೆ ಅನುವಾದಿಸಲಾಯಿತು.
- ನಿನ್ನೆ ನಾನು ಆಟೋದಲ್ಲಿ ಹೋಗುತ್ತಿದ್ದಾಗ ಎರಡು ಹಸುಗಳು ವಿಮಾನದ ಜೊತೆಗೆ ಹಾರುತ್ತಿರುವುದನ್ನು ನೋಡಿದೆ.
- ಇಂದು ಜನವರಿ 30, 2048 ರಂದು ನಾವು ಗಾಂಧಿಯವರ ಪುನರ್ಜನ್ಮವನ್ನು ಪರಿಗಣಿಸುತ್ತೇವೆ.

ಅಂತಹ ವಾಕ್ಯಗಳನ್ನು ನೀವು ಮೊದಲು ಕೇಳಿರುವುದು ಬಹುತೇಕ ಅಸಂಭಬವೇ ಸರಿ. ಆದರೆ ಈ ವಾಕ್ಯಗಳನ್ನು ಅರ್ಥಮಾಡಿಕೊಳ್ಳುವಲ್ಲಿ ನಿಮಗೆ ಯಾವುದೇ ಸಮಸ್ಯೆ ಇರುವುದಿಲ್ಲ. ನೀವು ಅವುಗಳನ್ನು ನಂಬದಿದ್ದರೂ ಸಹ, ಈ ರೀತಿಯ

ಹೊಚ್ಚ ಹೊಸ, ಹಿಂದೆಂದೂ ಕೇಳಿರದ ವಾಕ್ಯಗಳನ್ನು ರಚಿಸುವಲ್ಲಿ ನಿಮಗೆ ಯಾವುದೇ ಸಮಸ್ಯೆ ಇರುವುದಿಲ್ಲ. ವಾಸ್ತವವಾಗಿ, ನಾವು ದಿನನಿತ್ಯದ ಜೀವನದಲ್ಲಿ ಮಾತನಾಡುವ ವಿಷಯಗಳು ಸಂಪೂರ್ಣವಾಗಿ ಹೊಸದು ಮತ್ತು ಆ ವಿಷಯಗಳನ್ನು ಹಿಂದೆಂದೂ ಯಾರೂ ಹೇಳದಿರಬಹುದು. ನೀವು ಪತ್ರಿಕೆಗಳು, ಕಥೆಗಳು, ನಜ್ಮಾಗಳು, ಗಜಲ್ಗಳು, ಕವಿತೆಗಳ ಬಗ್ಗೆ ಯೋಚಿಸಿದರೆ, ಇದನ್ನು ಅರ್ಥಮಾಡಿಕೊಳ್ಳಲು ನಿಮಗೆ ಹೆಚ್ಚಿನ ಸಹಾಯ ಸಿಗುತ್ತದೆ.

ಎರಡು ವಿಷಯಗಳು; ಮೊದಲನೆಯದು ಸಮಯ ಮತ್ತು ಸ್ಥಳದ (ಸ್ಥಳಾಂತರ) ಮಿತಿಗಳನ್ನು ಮೀರಿದ ವಿಷಯಗಳ ಬಗ್ಗೆ ಮಾತನಾಡುವ ಸಾಮರ್ಥ್ಯ ಮತ್ತು ಎರಡನೆಯದು, ಸಂಪೂರ್ಣವಾಗಿ ಹೊಸ ಪದಗಳನ್ನು ರೂಪಿಸುವ ಮತ್ತು ಅವುಗಳನ್ನು ಅರ್ಥಮಾಡಿಕೊಳ್ಳುವ ನಮ್ಮ ಸಾಮರ್ಥ್ಯ (ಮುಕ್ತತೆ), ಇವೆರಡನ್ನೂ ನಾವು ಸಹಜವಾಗಿ ಮಾಡುತ್ತೇವೆ. ಹಾಗೆ ಮಾಡಲು ನಾವು ನಿಂತು ಅದರ ಬಗ್ಗೆ ಯೋಚಿಸಬೇಕಾಗಿಲ್ಲ. ಹಾಗಾಗಿ ಇದು ಅನನ್ಯ ಮತ್ತು ಜೀವನಕ್ಕೆ ಬಹಳ ಮಹತ್ವಪೂರ್ಣ. ನೀವು ಕೇವಲ ನಿಮ್ಮ ಮುಂದೆ ಇರುವ ವಿಷಯಗಳ ಬಗ್ಗೆ ಮಾತ್ರ ಮಾತನಾಡುವುದು ಹಾಗೂ ಬೇರೆ ಯಾವುದರ ಬಗ್ಗೆಯೂ ಮಾತನಾಡದಿರುವನ್ನು ಕಲ್ಪಿಸಿಕೊಳ್ಳಲು ಸಾಧ್ಯವೇ? ಮತ್ತು ನಿಮ್ಮ ಬಳಿ ಸೀಮಿತ ಉದ್ಗಾರಗಳನ್ನು ಮಾತ್ರ ಹೊಂದಿದ್ದೀರಿ ಮತ್ತು ನೀವು ಬಾಯಿ ತೆರೆದಾಗ, ನಿಮ್ಮ ಪಟ್ಟಿಯಿಂದ ಒಂದನ್ನು ಆರಿಸಿ ಮಾತನಾಡುತ್ತೀರಿ ಎಂದು ನೀವು ಊಹಿಸಬಲ್ಲಿರಾ? ಅಂತಹ ಭಾಷೆಯು ನಮ್ಮ ಈವರೆಗಿನ ಭಾಷೆಯ ತಿಳುವಳಿಕೆಯಿಂದ ದೂರವಿರುತ್ತದೆ. ಆದರೆ ಪ್ರಾಣಿಗಳ ಸಂವಹನ ವ್ಯವಸ್ಥೆಯು ಬಹುತೇಕ ಇದೇ ರೀತಿ ಇರುತ್ತದೆ.

ಮುಕ್ತತೆಯು ಹೊಸ ವಾಕ್ಯಗಳನ್ನು ಮತ್ತು ಸಂದೇಶಗಳನ್ನು ರಚಿಸಲು ಹಾಗೂ ವ್ಯಕ್ತಪಡಿಸಲು ಅವಕಾಶವನ್ನು ನೀಡುತ್ತದೆ ಮತ್ತು ಇದು ದ್ವಿವಿಧತೆಯ ಕಾರಣದಿಂದ ಸಾಧ್ಯವಾಗುತ್ತದೆ. ಹಾಗಾಗಿ ಪ್ರತಿಬಾರಿಯೂ ಹೊಸ ಮತ್ತು ವಿಭಿನ್ನ ಧ್ವನಿ ತುಣುಕುಗಳನ್ನು ರಚಿಸುವ ಅಗತ್ಯವಿಲ್ಲ. ಈ ಮುಕ್ತತೆ ಇಲ್ಲದಿದ್ದರೆ ಇತರ ಪ್ರಾಣಿಗಳಂತೆ ನಾವು ಮನುಷ್ಯರು ತತ್ಕಾಲಕ್ಕೆ ಅಂದರೆ ಅದೇ ಸಮಯ ಹಾಗೂ ಸ್ಥಳದಲ್ಲಿ ಮಾತ್ರ ಸಂದೇಶಗಳನ್ನು ವಿನಿಮಯ ಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತು. ನಮಗೆ ಇದೀಗ ಸಂವಾದಕ್ಕಾಗಿ ಯಾವುದೇ ಬಾಹ್ಯ ಪ್ರೇರಕಗಳ ಅಗತ್ಯವಿಲ್ಲ. ಇದು ಇತರ ಜೀವಿಗಳಿಗೆ ಅವಶ್ಯಕವಾಗಿದೆ ಮತ್ತು ಅವುಗಳ ಎಲ್ಲ ಸಂದೇಶಗಳು ಅದೇ ಸಮಯ, ಸಮಯ ಮತ್ತು ಪರಿಸ್ಥಿತಿಗೆ ಸೀಮಿತಗೊಂಡಿವೆ. (ಆದರೂ ಜೇನುನೊಣದ ಕುಣಿತವು ರಸದ ಸ್ಥಳದಿಂದ ಸ್ವಲ್ಪ ದೂರದಲ್ಲಿರುತ್ತದೆ. ಆದರೆ ಇದು ವಿಶೇಷ ಸನ್ನಿವೇಶದಲ್ಲಿ ಮತ್ತು ವಿಶೇಷ ಅರ್ಥಕ್ಕಾಗಿ ಮತ್ತು ಸೀಮಿತ ವ್ಯಾಪ್ತಿಗೆ ಒಳಪಟ್ಟಿದೆ.)

### ಪ್ರಸಾರ ಮತ್ತು ದಿಶಾತ್ಮಕ ಸ್ವೀಕೃತಿ (Broadcast Transmission and Directional Reception)

ಮನುಷ್ಯರು (ಅಥವಾ ಪ್ರಾಣಿಗಳು) ಮಾತನಾಡುವಾಗ ಶಬ್ದಗಳು ಪ್ರತಿ ದಿಕ್ಕಿನಲ್ಲಿಯೂ ಹರಡುತ್ತವೆ. ಮತ್ತು ಆಗಾಗ್ಗೆ ಕೇಳುಗನಿಗೆ ಧ್ವನಿ/ಧ್ವನಿಗಳು ಯಾವ ದಿಕ್ಕಿನಿಂದ ಬರುತ್ತಿವೆ ಎಂಬುದೂ ತಿಳಿದಿರುತ್ತದೆ. ಹೆಚ್ಚಿನ ಭಾಷೆಗಳು, ಮಾನವ ಅಥವಾ ಪ್ರಾಣಿಯಾಗಿರಲಿ, ಮಾತನಾಡುವ ಶಬ್ದಗಳು ಪ್ರತಿ ದಿಕ್ಕಿನಲ್ಲಿಯೂ ದೂರದವರೆಗೆ ಹರಡುವ ಗುಣವನ್ನು ಹೊಂದಿವೆ. ಅಂದರೆ, ಸಂದೇಶವನ್ನು ಸ್ವೀಕರಿಸುವವರು ಕಣ್ಣುಗಳ ವ್ಯಾಪ್ತಿಯೊಳಗೆ ಇರಬೇಕಾಗಿಲ್ಲ. ಸಂಕೇತ ಭಾಷೆಯ ಬಳಕೆಯಲ್ಲಿ ಇದು ಸಂಭವಿಸುವುದಿಲ್ಲ. ಅದರ ಬಳಕೆಯು ಸ್ವಲ್ಪ ಭಿನ್ನತೆ ಇರುತ್ತದೆ. ಸಂಕೇತ ಭಾಷೆಯನ್ನು ಬಳಸುವಾಗ ಸಂಕೇತ ನೀಡುವವರು ಹಾಗೂ ಸಂಕೇತ ಸ್ವೀಕರಿಸುವವರು ಇವರಿಬ್ಬರೂ ಪರಸ್ಪರ ನೋಡಬೇಕಾದುದು ಅತ್ಯಗತ್ಯ. ಸಂಕೇತಗಳನ್ನು ನೀಡುವವರ ಮತ್ತು ಸ್ವೀಕರಿಸುವವರ ನೋಟವು ಒಂದು ರೇಖೆಯೊಳಗೆ ಇದ್ದಾಗ ಸಂಕೇತವು ಪ್ರಸಾರಗೊಳ್ಳುತ್ತದೆ. ಅಂದರೆ ಅವರು ದೃಷ್ಟಿಯಿಂದ ಮರೆಯಾಗುವಂತಿಲ್ಲ. ಅವರು ಮರೆಯಲ್ಲಿದ್ದರೆ ಒಬ್ಬರು ನೀಡಿದ ಚಿಹ್ನೆಗಳನ್ನು ಮತ್ತೊಬ್ಬರು ನೋಡಲು ಸಾಧ್ಯವಾಗುವುದಿಲ್ಲ ಮತ್ತು ಪರಿಣಾಮವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ.

### ಕ್ಷಣಿಕತೆ (Transitoryness)

ಕ್ಷಣಿಕತೆ ಭಾಷಾ ಚಿಹ್ನೆಗಳ ತಾತ್ಕಾಲಿಕತೆಯನ್ನು ಸೂಚಿಸುತ್ತದೆ. ಅಂದರೆ, ಬೇಗನೆ ಮರೆಯಾಗುವುದು ಅಥವಾ ಮಸುಕಾಗುವುದು. ಈ ಗುಣವು ಮಾತನಾಡುವ ಭಾಷೆಗೆ ಮಾತ್ರ ಅನ್ವಯಿಸುತ್ತದೆ ಮತ್ತು ಅದರ ತಾತ್ಕಾಲಿಕ ಮತ್ತು ಅಲ್ಪಾವಧಿಯ ಬಗ್ಗೆ ಹೇಳುತ್ತದೆ. ಗಮನಾರ್ಹವಾಗಿ, ಭಾಷೆಯು ಮಾತನಾಡುವ ಧ್ವನಿ ಸಂಕೇತಗಳ ರೂಪದಲ್ಲಿ ಮಾತ್ರ

ಇರುತ್ತದೆ ಮತ್ತು ಮಾತನಾಡಿದ ಶಬ್ದಗಳು ಸ್ವಲ್ಪ ಕಾಲ ಮಾತ್ರ ಇರುತ್ತವೆ. ಮಾತನಾಡಿದಾಗ ಧ್ವನಿ ತರಂಗಗಳು ನಾಲ್ಕೂ ದಿಕ್ಕಿನಲ್ಲಿ ಹರಡುತ್ತವೆ ಮತ್ತು ಅಷ್ಟೇ ಬೇಗ ಮಾಯವಾಗುತ್ತವೆ. ಸ್ವಲ್ಪ ಸಮಯದ ನಂತರ ಅವು ಮತ್ತೆ ಕೇಳಿಸುವುದಿಲ್ಲ. ಮಾತನಾಡುವವನು ತನ್ನ ಮಾತನ್ನು ನಿಲ್ಲಿಸಿದಾಗ ಶಬ್ದಗಳು ಸಹ ಕೇಳಿಸುವುದಿಲ್ಲ. ಕೈಗಳು, ಮುಖ, ದೇಹದ ಇತರ ಅಂಗಗಳಿಂದ ನೀಡುವ ಸಂಜ್ಞೆ (ಸಂಕೇತ ಭಾಷೆ) ಗೂ ಇದು ಅನ್ವಯಿಸುತ್ತದೆ. ಇತರ ಕೆಲವು ರೀತಿಯ ಸಂವಹನಗಳು, ಉದಾಹರಣೆಗೆ, ಬರೆಯುವುದು ಅಥವಾ ಟೈಪಿಂಗ್ ಮಾಡುವುದು ಹೆಚ್ಚು ಶಾಶ್ವತವಾಗಿರುತ್ತದೆ. ಧ್ವನಿ ಸಂಕೇತಗಳನ್ನು ರೆಕಾರ್ಡ್ ಮಾಡಲು ಮತ್ತು ಸಂಗ್ರಹಿಸುವುದು ಈಗ ಸಾಧ್ಯವಾದರೂ, ಈ ಹಿಂದೆ ಅದು ಸಾಧ್ಯವಾಗುತ್ತಿರಲಿಲ್ಲ. ಅಂದಹಾಗೆ, ರೆಕಾರ್ಡ್ ಮಾಡಿದ ಧ್ವನಿ ಅಥವಾ ಸಂಕೇತಗಳನ್ನು ಕೇಳದ ಮತ್ತು ಪ್ಲೇ ಮಾಡದ ಹೊರತು ಅದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಈ ಸಂದರ್ಭಗಳಲ್ಲಿಯೂ ಹೊರಬರುವ ಶಬ್ದ ಕ್ಷಣಿಕವಾಗಿರುತ್ತದೆ.

**ವಿನಿಮಯತೆ (Interchangeability)**

ಪರಸ್ಪರ ವಿನಿಮಯಸಾಧ್ಯತೆ ಎಂದರೆ ಮನುಷ್ಯರು ಭಾಷಾ ಸಂಕೇತಗಳನ್ನು ನೀಡಬಹುದು ಮತ್ತು ಸ್ವೀಕರಿಸಬಹುದು. ನಿಸ್ಸಂಶಯವಾಗಿ, ಈ ಸಂಕೇತಗಳು (ಮಾತನಾಡುವವರಿಗೆ ಮತ್ತು ಕೇಳುಗರಿಗೆ) ಒಂದೇ ಆಗಿರಬೇಕು. ಹಾಗಾದಾಗ ಪರಸ್ಪರ ನೀಡಿದ ಸಂಕೇತಗಳನ್ನು ಅರ್ಥಮಾಡಿಕೊಳ್ಳಬಹುದು. ಅಂದರೆ ಕಳುಹಿಸುವವರಿಗೆ ಮತ್ತು ಸ್ವೀಕರಿಸುವವರಿಗೆ ಅವುಗಳ ಅರ್ಥ ಗೊತ್ತಿರಬೇಕು. ಮಾತನಾಡುವವರು ಮತ್ತು ಕೇಳುಗರು ವಿಭಿನ್ನ ಅರ್ಥಗಳೊಂದಿಗೆ ಲೆಕ್ಕವಿಲ್ಲದಷ್ಟು ಸಂಕೇತಗಳನ್ನು ತಯಾರಿಸಬಹುದು, ರವಾನಿಸಬಹುದು ಮತ್ತು ಸ್ವೀಕರಿಸಬಹುದು ಮತ್ತು ಅರ್ಥಮಾಡಿಕೊಳ್ಳಬಹುದು. ಪರಸ್ಪರ ವಿನಿಮಯವು ಪ್ರತಿ ಭಾಷೆಯ ಗುಣಮಟ್ಟವಾಗಿದೆ. ಆದಾಗ್ಯೂ ಇತರ ವಿನ್ಯಾಸದ ವೈಶಿಷ್ಟ್ಯಗಳ ಕಾರಣದಿಂದಾಗಿ ಮಾನವ ಭಾಷೆಯಲ್ಲಿ ಪರಸ್ಪರ ಬದಲಾಯಿಸುವಿಕೆಯು ಬಹಳ ಮುಖ್ಯವಾಗಿದೆ. ಈ ಕಾರಣದಿಂದಾಗಿ, ಭಾಷೆಯಲ್ಲಿ ಒಬ್ಬರು ಇನ್ನೊಬ್ಬ ವ್ಯಕ್ತಿಯ ಪರವಾಗಿ ಸಂದೇಶವನ್ನು ರವಾನಿಸಬಹುದು. ಉದಾಹರಣೆಗೆ, ವ್ಯಕ್ತಿ ತಾನು ಹುಡುಗಿಯಾಗಿದ್ದರೂ "ನಾನು ಹುಡುಗ" ಅಥವಾ ಅವನು ಮನುಷ್ಯನಾಗಿದ್ದರೂ "ನಾನು ಕಂಪ್ಯೂಟರ್" ಎಂದು ಹೇಳಬಹುದು. ನಾಟಕದ ಪಾತ್ರವಾಗಿ ಅಥವಾ ಆಟದಲ್ಲಿ ಅಥವಾ ಓಟಗಾರನ ಪಾತ್ರದಲ್ಲಿ ನಟಿಸುವಾಗಲೂ ಹೀಗೆ ಮಾಡಬಹುದು. ಇದು ಸುಳ್ಳು ವಾಕ್ಯವಲ್ಲ. ಏಕೆಂದರೆ ಮಾತನಾಡುವವನು ನೀಡುವ ಹೇಳಿಕೆಗಳನ್ನು ಎಂದು ಎಲ್ಲರೂ ಅರ್ಥಮಾಡಿಕೊಳ್ಳುತ್ತಾರೆ, ಈ ಹೇಳಿಕೆಗಳು ಮಾತನಾಡುವವರಿಗೆ ಅಥವಾ ಕೇಳುವವರಿಗೆ ಸಂಬಂಧಿಸಿರಬಹುದು ಅಥವಾ ಸಂಬಂಧಿಸದೆಯೂ ಇರಬಹುದು. ಮುಖ್ಯ ವಿಷಯವೆಂದರೆ ಅವು ಮಾತನಾಡುವವರಿಗೆ ಮತ್ತು ಕೇಳುವವರಿಗೆ ಒಂದೇ ಅರ್ಥವನ್ನು ಹೊಂದಿವೆ. ಒಬ್ಬ ವ್ಯಕ್ತಿಯು ತಾನು ಮಾತನಾಡಬಲ್ಲದನ್ನು ಮಾತ್ರ ಕೇಳುವ ಮೂಲಕ ಅರ್ಥಮಾಡಿಕೊಳ್ಳುತ್ತಾನೆ, ಅದು ಬೇರೆಯವರ ಕಡೆಯಿಂದ ಇರಬಹುದು ಅಥವಾ ಬೇರೆಯವರ ಬಗ್ಗೆ ಆಗಿರಬಹುದು. ಈ ಗುಣ ಬೇರೆ ಪ್ರಾಣಿಗಳ ಭಾಷೆಯಲ್ಲಿ ಕಾಣುವುದಿಲ್ಲ. ಉದಾಹರಣೆಗೆ, ರಾಣಿ ಇರುವೆಯು ತನ್ನ ಪದವಿ ಅಥವಾ ಸ್ಥಿತಿಯನ್ನು ಸೂಚಿಸಲು ಒಂದು ರೀತಿಯ ವಾಸನೆಯನ್ನು ಸ್ರವಿಸುತ್ತದೆ. ಆದರೆ ಅದರ ಪರವಾಗಿ ಬೇರೆ ಯಾವುದೇ ಇರುವೆಯು ಈ ಸಂಕೇತವನ್ನು ನೀಡಲು ಸಾಧ್ಯವಿಲ್ಲ.

**ಪೂರ್ಣ ಪ್ರತಿಕ್ರಿಯೆ (Total Feedback)**

ಭಾಷೆಯನ್ನು ಮಾತನಾಡುವವರು ತಮ್ಮ ಧ್ವನಿಯನ್ನು ಸ್ವತಃ ಕೇಳಿಸಿಕೊಳ್ಳಬಹುದಾಗಿದೆ ಹಾಗೂ ತಾವು ಹೇಳುತ್ತಿರುವುದನ್ನು ಮಾತನಾಡುತ್ತಲೇ ಮಾರ್ಪಡಿಸಬಹುದು ಅಥವಾ ನಿಯಂತ್ರಿಸಬಹುದು. ಇದೇ ರೀತಿ, ಸಾಂಕೇತಿಕ ಭಾಷೆಯನ್ನು ಬಳಸುವವರು ತಮ್ಮ ಸಂಕೇತಗಳನ್ನು ಸ್ವತಃ ನೋಡಬಹುದು, ಅನುಭವಿಸಬಹುದು ಮತ್ತು ನಿಯಂತ್ರಿಸಬಹುದು. ಸಂದೇಶವನ್ನು ವ್ಯವಸ್ಥಿತಗೊಳಿಸಲು ಅಥವಾ ನಿಯಂತ್ರಿಸಲು ಭಾಷೆಯ ಈ ಗುಣವು ಅಗತ್ಯವಾಗಿದೆ.

**ವಿಶಿಷ್ಟೀಕರಣ (Specialisation)**

ಭಾಷಾ ಚಿಹ್ನೆಗಳ ಪ್ರಾಥಮಿಕ ಉದ್ದೇಶ ಭಾಷೆಯ ಮೂಲಕ ಸಂವಹನವೇ ಹೊರತು ಕೇವಲ ಜೈವಿಕ ಕ್ರಿಯೆಯ ನೆರವೇರಿಕೆ ಅಲ್ಲ. ಮನುಷ್ಯರು ಮಾತನಾಡುವಾಗ ಅಥವಾ ಸಂಕೇತ ಭಾಷೆಯನ್ನು ಬಳಸುವಾಗ ಸಾಮಾನ್ಯವಾಗಿ ಸಂವಹನವು ಉದ್ದೇಶಪೂರ್ವಕವಾಗಿರುತ್ತದೆ. ಭಾಷಾ ಸಂಕೇತಗಳಿಗಾಗಿ ದೇಹದ ಅಂಗಾಂಗಗಳೂ ವಿಶೇಷ ರೀತಿಯಲ್ಲಿ ವಿಕಾಸಗೊಳ್ಳುತ್ತವೆ.

ವಿಶಿಷ್ಟೀಕರಣದ ಗುಣವು ಪ್ರಾಣಿಗಳ ಭಾಷೆಯಲ್ಲಿಯೂ ಇದೆ, ಆದರೆ ಅದರ ವ್ಯಾಪ್ತಿ ಬಹಳ ಸೀಮಿತವಾಗಿದೆ. ವಿಶಿಷ್ಟೀಕರಣದ ಅರ್ಥಪೂರ್ಣತೆಗೆ ಸಂಬಂಧಿಸಿದೆ. ಭಾಷೆಯಲ್ಲಿ ಅರ್ಥಪೂರ್ಣ ಸಂದೇಶಗಳನ್ನು ನೀಡುವ ಅಥವಾ ಪಡೆಯುವಂತಹ ಸಂಕೇತಗಳನ್ನು ಬಳಸಲಾಗುತ್ತದೆ. ಈ ಚಿಹ್ನೆಗಳು ಸಂದೇಶದ ವಿಷಯ ಅಥವಾ ಅಂಶಗಳಿಗೆ ಸಹ ಸಂಬಂಧಿಸಿರಬಹುದು, ಅಲ್ಲದೆ ಅವು ಅದಕ್ಕಿಂತ ಸಂಪೂರ್ಣವಾಗಿ ಭಿನ್ನವಾದ ಮಾತುಕತೆಗೆ ಬಳಸಬಹುದಾದ ಚಿಹ್ನೆಗಳಾಗಿರಬಹುದು. ಮಾನವ ಭಾಷೆಯು ವಿಭಿನ್ನ ಸಂದರ್ಭಗಳಲ್ಲಿ ವಿಶಿಷ್ಟ ಸಂಕೇತಗಳನ್ನು ರಚಿಸುವ ಅಪರಿಮಿತ ಸಾಮರ್ಥ್ಯವನ್ನು ಹೊಂದಿದೆ. ಆದ್ದರಿಂದ ಮನುಷ್ಯರು ಅಸಂಖ್ಯಾತ ಸಂದೇಶಗಳನ್ನು ರಚಿಸಬಹುದಾಗಿದೆ.

ವಿಶಿಷ್ಟವಲ್ಲದ ಸಂವಹನಕ್ಕೆ ಒಂದು ಉದಾಹರಣೆಯೆಂದರೆ ನಾಯಿ ಏದುಸಿರುಬಿಡುವುದು. ನಾಯಿ ಏದುಸಿರುಬಿಡುವುದು ಅದಕ್ಕೆ ಬಾಯಾರಿಕೆಯಾಗಿರುವುದನ್ನು ಅಥವಾ ಸೆಖೆ ಅಥವಾ ದಣಿವಾಗಿರುವುದನ್ನು ಸೂಚಿಸುತ್ತದೆ. ನಾಯಿಗಳು ತಮ್ಮ ದೇಹದ ಉಷ್ಣತೆಯನ್ನು ಸಮತೋಲನಗೊಳಿಸಿಕೊಳ್ಳಲು ಪ್ರಯತ್ನಿಸುವುದರಿಂದ ಹೀಗೆ ಏದುಸಿರು ಬಿಡುತ್ತವೆ. ಇಲ್ಲಿ ಸಂವಹನವು ಗೌಣವಾಗಿದೆ, ಏಕೆಂದರೆ ಪ್ರಾಥಮಿಕವಾಗಿ ಇದೊಂದು ಜೈವಿಕ ಪ್ರಕ್ರಿಯೆಯಾಗಿದೆ. ಹವಾಮಾನದ ವಿವರಗಳನ್ನು ನೀಡುವುದಕ್ಕಾಗಲೀ ಅಥವಾ ಯಾರೊಬ್ಬರ ಯೋಗಕ್ಷೇಮದ ಬಗ್ಗೆ ವಿಚಾರಿಸುವುದಕ್ಕಾಗಲೀ ನಾಯಿಗಳು ಏದುಸಿರು ಬಿಡುವುದಿಲ್ಲ.

**ಅರ್ಥವಂತಿಕೆ (Semantacity)**

ಪ್ರಪಂಚಕ್ಕೆ ಮತ್ತು ಅದರಲ್ಲಿರುವ ವಸ್ತುಗಳಿಗೆ ಅರ್ಥವನ್ನು ನೀಡಲು, ಅವುಗಳ ಅರ್ಥವನ್ನು ಅಭಿವ್ಯಕ್ತಿಸಲು ಧ್ವನಿಗಳನ್ನು ಕ್ರಮವಾಗಿ ಬಳಸುವ ಸಾಮರ್ಥ್ಯವನ್ನು ಅರ್ಥವಂತಿಕೆ ಎಂದು ಕರೆಯಲಾಗುತ್ತದೆ. ಕೆಲವು ಧ್ವನಿಗಳು ನೇರವಾಗಿ ಕೆಲವು ಅರ್ಥಗಳೊಂದಿವೆ ಸಂಬಂಧವನ್ನು ಹೊಂದಿವೆ. ಉದಾಹರಣೆಗೆ ಹಿಂದಿಯಲ್ಲಿ 'ಆ' ಮತ್ತು 'ಎ'. ಆದರೆ ಅನೇಕ ಧ್ವನಿಗಳು ಗುಂಪಿನಲ್ಲಿದ್ದಾಗ ಮಾತ್ರ ಅರ್ಥಪೂರ್ಣವಾಗುತ್ತವೆ, ಉದಾಹರಣೆಗೆ 'ಕಮಲ್' ಅಥವಾ 'ಕಾಕಾ'. ಅಂದರೆ, ನೀವು ಶಬ್ದಗಳನ್ನು ಒಂದು ನಿರ್ದಿಷ್ಟ ಕ್ರಮದಲ್ಲಿ ಇರಿಸಿದಾಗ ಅವು ಅರ್ಥವನ್ನು ನೀಡುವ ಕಾರ್ಯವನ್ನು ಮಾಡುತ್ತವೆ ಮತ್ತು ಇದು ಅರ್ಥವಂತಿಕೆ ಕಾರಣದಿಂದ ಸಾಧ್ಯವಾಗುತ್ತದೆ. ಉದಾಹರಣೆಗೆ, 'ತರಬೂಜ್' (ಕಲ್ಲಂಗಡಿ) ಪದವು ಎರಡು ಧ್ವನಿಗಳ ಜೋಡಣೆಯಿಂದ ಮಾಡಲ್ಪಟ್ಟಿದೆ, ಆದರೆ ಇದರಲ್ಲಿನ ಧ್ವನಿಗಳಾದ 'ತ', 'ರ', 'ಬೂ', 'ಜ' ಗಳನ್ನು ಇತರ ಯಾವುದೇ ಕ್ರಮದಲ್ಲಿ ಸೇರಿಸುವುದರಿಂದ ಅದು ಅರರ್ಥಪೂರ್ಣವಾಗುವುದಿಲ್ಲ. ಉದಾ, ಜರಬೂತ್, ಅಥವಾ ಬೂಜ್‌ತರ್ ಅಥವಾ ಬೂರ್‌ತಜ್, ಇತ್ಯಾದಿ.

**ನಿರಂಕುಶತೆ (Arbitrariness)**

ಬಳಸುವ ಧ್ವನಿ ತುಣುಕುಗಳು, ಧ್ವನಿರೂಪಗಳು ಮತ್ತು ಅವುಗಳ ಅರ್ಥದ ನಡುವೆ ಯಾವುದೇ ಅಂತರ್ಗತ ಅಥವಾ ತಾರ್ಕಿಕ ಸಂಬಂಧವಿಲ್ಲ. ಮನುಷ್ಯರ ಭಾಷೆಯು ಯಾವುದೇ ವಸ್ತು ಅಥವಾ ವಿಚಾರಕ್ಕೆ ಏನೋ ಒಂದು ಹೆಸರನ್ನು ಕೊಟ್ಟುಬಿಡುತ್ತದೆ, ಆ ಹೆಸರು ನಿರಂಕುಶವಾಗಿರುತ್ತದೆ. ಉದಾಹರಣೆಗೆ, ಬೆಕ್ಕು ಎಂಬ ಪದದಲ್ಲಿ ಬೆಕ್ಕಿನ ಗುಣವನ್ನು ಸೂಚಿಸುವಂತಹುದು ಏನೂ ಇಲ್ಲ. ಇಂಗ್ಲಿಷ್‌ನ cat ಎಂಬ ಪದವು 'ಬೆಕ್ಕು' ಎನ್ನುವುದನ್ನು ತೋರಿಸುತ್ತದೆ. ಮೂರನೇ ಭಾಷೆಯನ್ನು ಅಥವಾ ಮತ್ತೊಂದು ಮಾತನಾಡುವ ಮತ್ತು ಅರ್ಥಮಾಡಿಕೊಳ್ಳುವ ವ್ಯಕ್ತಿಯು ಕ್ಯಾಟ್ ಅಥವಾ ಬೆಕ್ಕು ಎಂಬ ಪದವನ್ನು ಈ ಹೆಸರಿನ ಪ್ರಾಣಿಯ ಚಿತ್ರದೊಂದಿಗೆ ಸಂಯೋಜಿಸಲು ಸಾಧ್ಯವಿಲ್ಲ ಏಕೆಂದರೆ ಅವನು ಈ ಪ್ರಾಣಿಯನ್ನು ಬೇರೆಯದೇ ಹೆಸರಿನಿಂದ ಗುರುತಿಸುತ್ತಾನೆ. ಅಂತೆಯೇ ಅಳಿಲು ಎಂಬ ಪದವನ್ನೇ ಏಕೆ ಆರಿಸಲಾಯಿತು ಎಂಬುದರಲ್ಲಿ ಯಾವುದೇ ತರ್ಕವಿಲ್ಲ. ಅಳಿಲು ಎಂಬ ಪದವು ದೊಡ್ಡದಾಗಿದೆ, ಆದರೆ ಸಿಂಹ, ಆನೆ, ನಾಯಿ, ಮುಂತಾದ ದೊಡ್ಡ ಪ್ರಾಣಿಗಳಿಗಿಂತ ಅಳಿಲುಗಳು ಚಿಕ್ಕದಾಗಿರುತ್ತವೆ. ಒಂದೇ ಪರಿಕಲ್ಪನೆಗೆ ವಿವಿಧ ಭಾಷೆಗಳಲ್ಲಿ ವಿಭಿನ್ನ ಪದಗಳಿದ್ದರೂ ಸಹ ಅವು ಒಂದೇ ವಸ್ತುವನ್ನು ಸೂಚಿಸುತ್ತವೆ. ಉದಾ: ಮರಾಠಿಯಲ್ಲಿ

ಹತ್ತೀ, ಸಂಸ್ಕೃತದಲ್ಲಿ ಗಜ್, ಇಂಗ್ಲಿಷ್‌ನಲ್ಲಿ ಎಲಿಫೆಂಟ್, ಅರೇಬಿಕ್ ಮತ್ತು ಟರ್ಕಿಶ್ ಮತ್ತು ರಷ್ಯನ್ ಭಾಷೆಯಲ್ಲಿ ಫೀಲ್, ರಷ್ಯನ್ ಭಾಷೆಯಲ್ಲಿ ಸ್ಲೋನ್ ಎನ್ನಲಾಗುವ ಆನೆಗೆ ವಿಭಿನ್ನ ಭಾಷೆಗಲಲ್ಲಿ ವಿಭಿನ್ನ ಪದಗಳನ್ನು ಬಳಸುವುದು ಭಾಷಾ ವಿಶೇಷವನ್ನು ಅರಿತ ಎಲ್ಲರಿಗೂ ತಿಳಿದ ವಿಷಯವಾಗಿದೆ. ತಾವು ಬಳಸುವ ಭಾಷೆಯಲ್ಲಿ ಜನ ತಿಳಿದಿರುತ್ತಾರೆ, ಅರ್ಥಮಾಡಿಕೊಳ್ಳುತ್ತಾರೆ ಹಾಗೂ ಬಳಸುತ್ತಾರೆ.

ಸಾಂಕೇತಿಕ ಭಾಷೆಗಳಲ್ಲಿ ವಿಚಾರಗಳ ವಿನಿಮಯವು ದೃಷ್ಟಿಯ ಮೂಲಕ ನಡೆಯುತ್ತದೆ ಮತ್ತು ಇದೇ ಕಾರಣಕ್ಕಾಗಿ ಅವುಗಳಲ್ಲಿ ಪ್ರತೀಕಾತ್ಮಕತೆ (Iconicity) ಇರುತ್ತದೆ. ಪ್ರತೀಕಾತ್ಮಕತೆಯ ಕಾರಣದಿಂದಾಗಿ, ಈ ಸಂಕೇತಗಳು ಸೀಮಿತ ಸಂಖ್ಯೆಯ ಅರ್ಥಗಳನ್ನು ಮಾತ್ರ ಸಂವಹನ ಮಾಡಬಹುದು. ಉದಾಹರಣೆಗೆ, ಅಮೇರಿಕದ ಸಂಕೇತ ಭಾಷೆಯಲ್ಲಿ 'ಮನೆ' ಎಂದು ಹೇಳಲು ಮನೆಯ ಛಾವಣಿ ಮತ್ತು ಗೋಡೆಗಳನ್ನು ಪ್ರತಿನಿಧಿಸುವ ರೀತಿಯಲ್ಲು ಕೈಗಳನ್ನು ಮಡಚಿ ಸೂಚಿಸಲಾಗುತ್ತದೆ. ಆದಾಗ್ಯೂ, ಅಂತಹ ಭಾಷೆಗಳಲ್ಲಿಯೂ ಸಹ ಅನೇಕ ಚಿಹ್ನೆಗಳು ಸಾಂಕೇತಿಕವಾಗಿರುವುದಿಲ್ಲ ಮತ್ತು ಅವುಗಳ ರೂಪ ಮತ್ತು ಅರ್ಥದ ನಡುವಿನ ಸಂಬಂಧವು ನಿರಂಕುಶವಾಗಿರುತ್ತದೆ. ಒಟ್ಟಾರೆಯಾಗಿ, ಪ್ರತೀಕಾತ್ಮಕ ಸಂಕೇತಗಳಲ್ಲಿ ಅನಿಯಂತ್ರಿತತೆಯ ಆಧಾರ ಮತ್ತು ಸ್ವರೂಪವು ವಿಭಿನ್ನವಾಗಿರುತ್ತದೆ ಹಾಗೂ ಇದರಲ್ಲಿ ಚಿತ್ರಾತ್ಮಕ ರಚನೆಗಳನ್ನು ಬಳಸಲಾಗುತ್ತದೆ. ಮಾತನಾಡುವ ಮತ್ತು ಕೇಳುವ ಭಾಷೆಯಿಂದಾಗಿ ಭಾಷೆ ವ್ಯಾಪಕವಾಗುವ ಸಾಧ್ಯತೆಯು ಹೆಚ್ಚಾಗುತ್ತದೆ ಎಂಬುದು ಗಮನಿಸಬೇಕಾದ ಸಂಗತಿ.

### ಪ್ರತ್ಯೇಕತೆ (Discreteness)

ಭಾಷಾ ನಿರೂಪಣೆಗಳನ್ನು ಸಣ್ಣ ಪ್ರತ್ಯೇಕ ಘಟಕಗಳಾಗಿ ವಿಂಗಡಿಸಬಹುದು ಮತ್ತು ವ್ಯವಸ್ಥಿತ ರೀತಿಯಲ್ಲಿ ಪರಸ್ಪರ ನಿಯಮಬದ್ಧ ರೀತಿಯಲ್ಲಿ ಜೋಡಿಸಬಹುದು. ಈಗಾಗಲೇ ಸ್ಥಾಪಿಸಲಾದ ವರ್ಗಗಳು ಅಥವಾ ಶ್ರೇಣಿಗಳ ಆಧಾರದ ಮೇಲೆ ಈ ಘಟಕಗಳನ್ನು ಪ್ರತ್ಯೇಕವಾಗಿ ಸ್ಪಷ್ಟವಾಗಿ ಗುರುತಿಸಬಹುದು. ಉದಾಹರಣೆಗೆ, ಇಂಗ್ಲಿಷ್‌ನಲ್ಲಿ ಬಹುವಚನವನ್ನು ಸೂಚಿಸಲು /s/ ಧ್ವನಿಮಾ (Morpheme) ಅನ್ನು ಸೇರಿಸಲಾಗುತ್ತದೆ, ಇದು ಅನೇಕ ನಾಮಪದಗಳ ಕೊನೆಯಲ್ಲಿ ಸೇರುತ್ತದೆ. ಈ ಮಾರ್ಫೀಮ್ /s/ ಅನ್ನು ವರ್ಗದ ಆಧಾರದ ಮೇಲೆ ಗುರುತಿಸಬಹುದು, ಹೇಗೆಂದರೆ bus ನಲ್ಲಿ /s/ ಬಹುವಚನ ಸೂಚಿಸುವುದಿಲ್ಲ, ಇಲ್ಲಿ ಅದು ಪದದ ಭಾಗವಾಗಿದೆ, ಆದರೆ cats ನಲ್ಲಿ ಇದು ವ್ಯಾಕರಣದ ಘಟಕವಾಗಿದೆ ಮತ್ತು ಇದು ಬಹುವಚನದ ವರ್ಗವನ್ನು ಸೂಚಿಸುತ್ತದೆ. ಅಂದರೆ ಇಂಗ್ಲಿಷ್‌ನಲ್ಲಿ ವಿವಿಧ ರೀತಿಯ 's' ಧ್ವನಿಗಳಿವೆ ಮತ್ತು ಅವುಗಳು ಈ ರೀತಿ ಇವೆ- ಮೊದಲನೆಯದಾಗಿ caps, bats, chalks ಮುಂತಾದ ಪದಗಳಲ್ಲಿ /s/ ಧ್ವನಿಯು ಅವುಗಳನ ಬಹುವಚನವನ್ನು ಮಾಡುತ್ತದೆ; ಎರಡನೆಯದಾಗಿ walks, talks, swims ಮುಂತಾದ ಪದಗಳಲ್ಲಿ /s/ ಧ್ವನಿಯು ತೃತೀಯ ಪುರುಷ, ಏಕವಚನ ಮತ್ತು ವರ್ತಮಾನ ಕಾಲ ಎಂಬುದನ್ನು ಸೂಚಿಸುತ್ತದೆ. ಮೂರನೆಯದಾಗಿ bus, yes, fuss, guess ಮುಂತಾದ ಪದಗಳಲ್ಲಿ /s/' ಧ್ವನಿಯು ಪದದ ಭಾಗವಾಗಿದೆ, ಉದಾಹರಣೆಗೆ ಒಂದು ವೇಳೆ ಹಿಂದಿಯ ಉದಾಹರಣೆಗಳನ್ನು ಗಮನಿಸಿದರೆ, सलाइयाँ, इकाइयाँ, पकौड़ियाँ ಮುಂತಾದವುಗಳ ಕೊನೆಯಲ್ಲಿ ಬರುವ याँ ಅಕ್ಷರ ಪದಗಳು ಬಹುವಚನ ರೂಪದಲ್ಲಿವೆ ಎಂಬ ಅರ್ಥವನ್ನು ನೀಡುತ್ತದೆ. ಆದರೆ आशियाँ, मियाँ, ಮುಂತಾದುವುಗಳಲ್ಲಿ ಈ ಧ್ವನಿಯು ಪದದ ಭಾಗವಾಗಿದೆ. ಅದೇ ರೀತಿ 'चलता', 'भागता', 'गता', 'उठ' ನಂತರ ಸೇರ್ಪಡೆಯಾದ 'ता' ಧ್ವನಿಯು ಈ ಕ್ರಿಯಾಪದಗಳು ಮೂರನೇ ವ್ಯಕ್ತಿ, ಏಕವಚನ, ಪುಲ್ಲಿಂಗ ಮತ್ತು ವರ್ತಮಾನದಲ್ಲಿವೆ ಎಂದು ಸೂಚಿಸುತ್ತದೆ. ಆದರೆ ಈ ಧ್ವನಿಯು पपीता, माता, पिता ಮುಂತಾದ ಪದಗಳ 'ता' ಧ್ವನಿಗಿಂತ ಭಿನ್ನವಾಗಿದೆ, ಈ ತುಣುಕುಗಳು ನಾಮಪದ ಮತ್ತು ಕ್ರಿಯಾಪದದ ವರ್ಗವನ್ನು ಸೂಚಿಸುತ್ತವೆ.

### ಉತ್ಪಾದಕತೆ (Productivity)

ಉತ್ಪಾದಕತೆ ಎಂದರೆ ಭಾಷಾ ಬಳಕೆದಾರರು ಹೊಸ ಪದಗಳನ್ನು ರಚಿಸುವುದು ಮತ್ತು ಅವುಗಳನ್ನು ಅರ್ಥಮಾಡಿಕೊಳ್ಳುವುದು. ಮಾನವರಲ್ಲಿ ಅನಿಯಮಿತ ಪದಗಳು ಮತ್ತು ವಾಕ್ಯಗಳನ್ನು ರಚಿಸುವ ಸಾಮರ್ಥ್ಯವಿರುತ್ತದೆ ವ್ಯಾಕರಣದ ಮಾದರಿ ಪರಿಕಲ್ಪನೆಯು ಭಾಷೆಯ ಬಳಕೆ ಮತ್ತು ತಿಳುವಳಿಕೆಯನ್ನು ಸುಗಮಗೊಳಿಸುವ ಉತ್ಪಾದಕತೆಯ ಕಲ್ಪನೆಯೊಂದಿಗೆ ಸಹ ಸಂಬಂಧ ಹೊಂದಿದೆ. ಭಾಷೆ ನಿರಂತರವಾಗಿ ಬದಲಾಗುತ್ತಿರುತ್ತದೆ. ಹೊಸ ಪದಗಳು, ವಾಕ್ಯಗಳನ್ನು ಸಾರ್ವಕಾಲಿಕವಾಗಿ

ರಚಿಸಲಾಗುತ್ತದೆ ಮತ್ತು ಪದಗಳು ಹಾಗೂ ಚಿಹ್ನೆಗಳ ಅರ್ಥಗಳು ಸಂದರ್ಭ ಮತ್ತು ಪರಿಸ್ಥಿತಿಗೆ ಅನುಗುಣವಾಗಿ ಬದಲಾಗುತ್ತಿರುತ್ತವೆ. ಇಲ್ಲಿ ಹಲವಾರು ರೀತಿಯ ಉತ್ಪಾದಕತೆಯ ಬಗ್ಗೆ ಮಾತನಾಡಲಾಗುತ್ತಿದೆ. ಮೊದಲನೆಯದಾಗಿ, ನಿಯಮಗಳ ಆಧಾರದ ಮೇಲೆ ಸ್ವಲ್ಪ ಕಲಿಕೆಯೊಂದಿಗೆ ಅನೇಕ ಹೊಸ ವಾಕ್ಯಗಳನ್ನು ರಚಿಸಲು ಸಾಧ್ಯವಾಗುತ್ತದೆ; ಎರಡನೆಯದಾಗಿ, ನಿಯಮಗಳ ಆಧಾರದ ಮೇಲೆ ಇತರ ಭಾಷೆಗಳಿಂದ ಪದಗಳನ್ನು ತೆಗೆದುಕೊಂಡು ತನ್ನ ಭಾಷೆಯ ನಿಯಮಗಳ ಪ್ರಕಾರ ಅವುಗಳನ್ನು ಜೋಡಿಸುವುದು ಮತ್ತು ಅವುಗಳನ್ನು ತಮ್ಮ ಸ್ವಂತ ಭಾಷೆಯಲ್ಲಿ ಸೇರಿಸುವುದು; ಮೂರನೆಯದಾಗಿ, ಹೊಸ ವಿಚಾರ, ಹೊಸ ವಸ್ತು ಮತ್ತು ಹೊಸ ಕ್ರಿಯೆಯ ಬಗ್ಗೆ ಕಲ್ಪಿಸುವುದು ಅಥವಾ ಹುಡುಕುವುದು ಮತ್ತು ನಂತರ ಅದಕ್ಕೆ ಹೊಸ ಹೆಸರನ್ನು ನೀಡುವುದು ಅಥವಾ ಅದಕ್ಕೆ ಹೊಸ ಪದವನ್ನು ರಚಿಸುವುದು. ನಂತರ ಈ ರೀತಿಯಾಗಿ ವಾಕ್ಯ ಮತ್ತು ಸಂಭಾಷಣೆಯ ಮಟ್ಟದಲ್ಲಿ ಭಾರಿ ಉತ್ಪಾದಕತೆ ಸಾಧ್ಯವಾಗುತ್ತದೆ. ಇದು ಪ್ರತಿ ಕ್ಷಣವೂ ಹೊಸ ಹೇಳಿಕೆಗಳು ಮತ್ತು ಸಂಕೇತಗಳ ರೂಪದಲ್ಲಿ ರಚಿಸಲ್ಪಡುತ್ತದೆ. ಅಗಾಧ ಉತ್ಪಾದಕತೆಗಾಗಿ ದ್ವಿವಿಧತೆ ಮತ್ತು ಮುಕ್ತತೆ ಎರಡೂ ಅಗತ್ಯವಾಗಿವೆ.

**ಸಾಂಪ್ರದಾಯಿಕ ವರ್ಗಾವಣೆ (Traditional Transmission)**

ಇದನ್ನು ಸಾಂಸ್ಕೃತಿಕ ವರ್ಗಾವಣೆ ಎಂದೂ ಕರೆಯುತ್ತಾರೆ. ಮಾನವರಲ್ಲಿ ಭಾಷಾ ಸಾಮರ್ಥ್ಯವು ಜನ್ಮಜಾತವಾಗಿದ್ದರೂ ಹುಟ್ಟಿದ ನಂತರ ಸಾಮಾಜಿಕ ವಾತಾವರಣದಲ್ಲಿ ಭಾಷೆಗಳನ್ನು ಕಲಿಯಲಾಗುತ್ತದೆ. ಭಾಷೆಯನ್ನು ಬಳಸುವ ಜನರೊಂದಿಗೆ ಸಂವಹನ ನಡೆಸುತ್ತಾ ಮಕ್ಕಳು ಮಾತನಾಡಲು ಕಲಿಯುತ್ತಾರೆ. ಭಾಷೆ ಮತ್ತು ಸಂಸ್ಕೃತಿ ಪರಸ್ಪರ ಆಳವಾಗಿ ಹೆಣೆದುಕೊಂಡಿವೆ. ಸಾಂಪ್ರದಾಯಿಕ ಸಂಸ್ಕೃತಿಗೆ ಪ್ರತಿಕ್ರಿಯಿಸುವ ಮೂಲಕ ಮಾನವ ಭಾಷೆ ಸ್ಪಷ್ಟವಾಗಿ ವರ್ಗಾವಣೆಯಾಗುತ್ತದೆ. ಇತರ ಜೀವಿಗಳ ಭಾಷೆಗಳ ಸೀಮಿತ ವ್ಯಾಪ್ತಿಯ ಕಾರಣ, ಅವುಗಳಲ್ಲಿ ಈ ರೀತಿಯ ವರ್ಗಾವಣೆ ಅಗತ್ಯವಿಲ್ಲ. ಪ್ರಾಣಿಗಳ ಭಾಷೆಯ ಈ ಸೀಮಿತ ವರ್ಗಾವಣೆ ಸಾಮಾಜಿಕವೇ ಅಥವಾ ಜೈವಿಕವೇ ಎಂಬ ವಿಚಾರದಲ್ಲಿ ಇನ್ನೂ  ಚರ್ಚೆಗಳು ನಡೆಯುತ್ತಿವೆ. ಅಂದರೆ, ಜೇನುನೊಣವು ಇತರರನ್ನು ನೋಡಿ ನೃತ್ಯ ಮಾಡುವ ಮೂಲಕ ಸಂಕೇತವನ್ನು ಕಲಿಯುತ್ತದೆಯೇ ಅಥವಾ ಹುಟ್ಟಿನಿಂದಲೇ ಈ ನೃತ್ಯವನ್ನು ತಿಳಿದಿದೆಯೇ? ಪಕ್ಷಿಗಳ ಹಾಡುಗಾರಿಕೆಗೂ ಇದು ಅನ್ವಯಿಸುತ್ತದೆ. ಭಾಷಾ ಕಲಿಕೆಯು ಮಾನವ ಸಮಾಜದಲ್ಲಿ ಸಾಂಸ್ಕೃತಿಕ/ಸಾಮಾಜಿಕ ಸಂವಹನದ ಒಂದು ಭಾಗವಾಗಿದೆ ಮತ್ತು ಈ ಸಾಂಸ್ಕೃತಿಕ/ಸಾಮಾಜಿಕ ಸಂವಹನದಿಂದಾಗಿ, ಎಲ್ಲ ಮಕ್ಕಳು ತಮ್ಮ ಭಾಷೆಯನ್ನು ಕಲಿಯುತ್ತಾರೆ. ಮಕ್ಕಳು ತಾವು ಬೆಳೆಯುವ ಸಮಾಜದಲ್ಲಿ ಮಾತನಾಡುವ ಭಾಷೆಯನ್ನು ಸಹಜವಾಗಿ ಕಲಿಯುತ್ತಾರೆ.

**ಮಾತಿನ ವಂಚನೆ (Prevarication)**

ಸುಳ್ಳು ಹೇಳುವುದು ಅಥವಾ ಮೋಸ ಮಾಡುವುದನ್ನು ಮಾತಿನ ಮೋಸ ಎಂದು ಕರೆಯುತ್ತಾರೆ. ಭಾಷೆಯನ್ನು ಬಳಸಿ, ಒಬ್ಬ ವ್ಯಕ್ತಿಯು ಸುಳ್ಳು ಮತ್ತು ಅರ್ಥಹೀನ ಹೇಳಿಕೆಗಳನ್ನು ಸಹ ರಚಿಸಬಹುದು. ಇದು ಹಾಕೆಟ್ ನಂತರ ತನ್ನ ಪಟ್ಟಿಗೆ ಸೇರಿಸಿದ ಗುಣವಾಗಿದ್ದು ಇದೂ ಸಹ ಭಾಷಾ ಬಳಕೆಯ ಲಕ್ಷಣಕ್ಕೆ ಸಂಬಂಧಿಸಿದೆ, ಇದು ಸ್ಥಳಾಂತರ ಮತ್ತು ಮುಕ್ತತೆಯೊಂದಿಗೆ ಸೇರಿದ್ದರೂ ಕೆಲವು ವಿಧಗಳಲ್ಲಿ ಇದು ಅವುಗಳಿಗಿಂತ ಭಿನ್ನವಾಗಿದೆ. ಮಾತನಾಡುವವನು (ಸಂದೇಶ ನೀಡುವವನು) ತಪ್ಪು ಅಥವಾ ಸುಳ್ಳು ಸಂದೇಶಗಳನ್ನು ಉದ್ದೇಶಪೂರ್ವಕವಾಗಿ ನೀಡಬಹುದೆಂಬುದನ್ನು ಇದು ಸೂಚಿಸುತ್ತದೆ. ಅದು ತನಗೇ ಅರಿವಿಲ್ಲದೆ ನೀಡಿದ ಹೇಳಿಕೆಯೂ ಆಗಿರಬಹುದು. ಅಲ್ಲದೆ ಅದು ಭಾಷೆಯ ನಿಯಮಗಳನ್ನು ಬಳಸಿ ಯಾರಿಗೂ ಅರ್ಥವಾಗದ ಅರ್ಥಹೀನ ವಾಕ್ಯಗಳನ್ನು ಮಾಡುವುದೂ ಆಗಿರಬಹುದು. ಹಾಗಿದ್ದೂ ಆ ವಾಕ್ಯವು ವ್ಯಾಕರಣಿಕವಾಗಿ ಎಲ್ಲ ರೀತಿಯಲ್ಲೂ ಸಮರ್ಪಕ ಅನ್ನಿಸುವಂತೆ ಇರುತ್ತದೆ. ಮಾನವ ಭಾಷೆಯ ಈ ಗುಣವು ಸಾಮಾಜಿಕ ಮತ್ತು ಸಾಂಸ್ಕೃತಿಕ ಮಟ್ಟದಲ್ಲಿ ಮುಖ್ಯವಾಗಿದೆ ಏಕೆಂದರೆ ಇದು ಮಾನವ ಇತರ ಪ್ರಾಣಿಗಳಿಗಿಂತ ಭಿನ್ನವಾಗಿದ್ದಾನೆಂಬುದನ್ನು  ತೋರಿಸುತ್ತದೆ. ಅದು ಭಾಷೆ ಮತ್ತು ಸಂದೇಶಗಳಲ್ಲಿ ಸಮಯ ಮತ್ತು ಪರಿಸ್ಥಿತಿಗಳೊಂದಿಗೆ ವಾಸ್ತವವನ್ನು ಪ್ರತ್ಯೇಕಿಸಬಹುದು. ಇದರಲ್ಲಿ ಕಲ್ಪನೆ ಮತ್ತು ಕನಸುಗಳು ಸೇರಿವೆ, ಜೊತೆಗೆ ಮೋಸ ಮತ್ತು ವಂಚನೆಯೂ ಸೇರಿಕೊಂಡಿವೆ. ಭಾಷಾ ಸಾಮರ್ಥ್ಯವನ್ನು ಬಳಸಿಕೊಂಡು ಅದರಿಂದ ವಿವಿಧ ತಂತ್ರ/ಕುತಂತ್ರಗಳನ್ನು ಮಾಡಬಹುದು. ಚಿಕ್ಕ ಮಕ್ಕಳೂ ಕೂಡ ಮೂರ್ನಾಲ್ಕು ವರ್ಷ ವಯಸ್ಸಾಗುವ ವೇಳೆಗೆ ಇಂತಹ ತಂತ್ರಗಳನ್ನು ಮಾಡಲು ಪ್ರಾರಂಭಿಸುತ್ತಾರೆ. ಸನ್ನಿವೇಶಕ್ಕೆ ಸಂಭಂದಿಸಿದಂತೆ ಏನಾಯಿತು ಮತ್ತು ಅವರು ಏನು ಮಾಡಿದರು

ಎಂಬುದರ ಬಗ್ಗೆ ಮಕ್ಕಳು ಸುಳ್ಳು ಹೇಳಬಹುದು. ಆದರೆ ಅವರು ತನ್ನ ಭಾವನೆಗಳ ಬಗ್ಗೆ ಸುಳ್ಳು ಹೇಳಲು ಸಾಧ್ಯವಿಲ್ಲ. ಮಕ್ಕಳು ಹತ್ತು ವರ್ಷಕ್ಕೆ ಬರುವ ಹೊತ್ತಿಗೆ ಅವರ ಸುಳ್ಳುಗಳು ಪಕ್ವವಾಗುತ್ತವೆ ಮತ್ತು ಜನರನ್ನು ವಂಚಿಸಲು, ಮೋಸಗೊಳಿಸಲುಅವರು ಬೈಗುಳ ಮತ್ತು ಸುಳ್ಳು ಹೇಳುವುದನ್ನು ಚೆನ್ನಾಗಿ ಕಲಿಯುತ್ತಾರೆ.

ವಯಸ್ಕರು ವಿವಿಧ ರೀತಿಯಲ್ಲಿ ಮತ್ತು ವಿವಿಧ ಉದ್ದೇಶಗಳಿಗಾಗಿ ಸುಳ್ಳು ಹೇಳುತ್ತಾರೆ. ಜನರನ್ನು ದುಃಖದಿಂದ ರಕ್ಷಿಸಲು, ಸಾಮಾಜಿಕ ಸಂಬಂಧಗಳನ್ನು ಕಾಪಾಡಿಕೊಳ್ಳಲು, ಅಧಿಕಾರದ ಆಸೆಗಾಗಿ, ತನ್ನನ್ನು ತಾನು ರಕ್ಷಿಸಿಕೊಳ್ಳಲು, ತನ್ನ ಪಾಲಿಗಿಂತ ಹೆಚ್ಚಿನದನ್ನು ಪಡೆಯಲು ಹಾಗೂ ಇಂತಹ ಮತ್ತಿತರ ಕಾರಣಗಳಿಗೆ ಸುಳ್ಳು ಹೇಳುತ್ತಾರೆ. ಇಂತಹ ಸುಳ್ಳಿನ ಶಕ್ತಿಯ ಬಗ್ಗೆ ಅನೇಕ ವಿರೋಧಾಭಾಸಗಳು ಇರಬಹುದು. ಒಬ್ಬ ವೈದ್ಯನು ರೋಗಿಗೆ ಸಾಂತ್ವನ ನೀಡಲು ಮತ್ತು ಖಾಯಿಲೆಯ ವಿರುದ್ಧ ಅವನ ಹೋರಾಟದ ಶಕ್ತಿಯನ್ನು ಕಾಪಾಡುವುದಕ್ಕಾಗಿ ಸುಳ್ಳು ಭರವಸೆ ನೀಡುತ್ತಾನೆ, ಬೇಟೆಗಾರ ತನ್ನ ಬೇಟೆಯ ನಿಖರವಾದ ಸ್ಥಳವನ್ನು ಸೂಚಿಸದೆ ಬಲಿಪಶುವನ್ನು ವಿರುದ್ಧ ದಿಕ್ಕಿನಲ್ಲಿ ಕಳುಹಿಸುತ್ತಾನೆ, ಹತಾಶೆಯ ಸ್ಥಿತಿಯಲ್ಲಿರುವ ವ್ಯಕ್ತಿಯನ್ನು ಉತ್ಸಾಹಗಳಿಸಲು ಅರ್ಧ ಸತ್ಯವನ್ನು ಹೇಳುತ್ತೇವೆ, ಇತ್ಯಾದಿ. ಇದರೊಂದಿಗೆ ವಕೀಲರ ವೃತ್ತಿಗೆ ಸಂಬಂಧಿಸಿದ ಪ್ರಶ್ನೆಗಳಿವೆ, ಆ ವೃತ್ತಿಯು ಸಮರ್ಥನೀಯವಾಗಿದೆಯೇ?

ಆದಾಗ್ಯೂ, ಮಾನವನ ಭಾಷೆಯ ಈ ಶಕ್ತಿಯು ಅವನಿಗೆ ಮೋಹಕ ಹೊಗಳಿಕೆಯನ್ನು ರೂಪಿಸುವ ಸಾಮರ್ಥ್ಯವನ್ನು ನೀಡುತ್ತದೆ, ಆದರ್ಶ ವ್ಯಕ್ತಿತ್ವವನ್ನು ಸೃಷ್ಟಿಸುತ್ತದೆ, ಕಾಲ್ಪನಿಕ ರಾಮರಾಜ್ಯ ಮತ್ತು ನರಕವನ್ನು ಸೃಷ್ಟಿಸುತ್ತದೆ. ಈ ಗುಣದ ಒಂದು ರೂಪ ಅನೇಕ ಅರ್ಥದ್ದಾಗಿದೆ. ಇದನ್ನು ಉದ್ದೇಶಪೂರ್ವಕವಾಗಿ ಮತ್ತು ತಿಳಿದೂ ತಿಳಿಯದೆ ಎರಡೂ ರೀತಿಯಲ್ಲಿ ಮಾಡಲಾಗುತ್ತದೆ. ಪದಗಳು ಮತ್ತು ಅವುಗಳ ಗುಂಪುಗಳೊಂದಿಗೆ ಆಟವಾಡುವಾಗ ಈ ಶಕ್ತಿಯು ಹೆಚ್ಚು ಉಪಯುಕ್ತವಾಗಿದೆ. ಸಾಹಿತ್ಯ, ಕಲ್ಪನೆ, ಚುಚ್ಚುಮಾತು, ತತ್ತ್ವಶಾಸ್ತ್ರದ ಹೇಳಿಕೆಗಳಲ್ಲಿ ಈ ಸಂದರ್ಭ-ನಿರ್ಧಾರಿತ ಅನೇಕಾರ್ಥತಾವಾದವನ್ನು ಬಹಳಷ್ಟು ಬಳಸಲಾಗುತ್ತದೆ.

### ಸ್ವಚೈತನ್ಯ (Reflexiveness)

ಭಾಷೆಯ ಬಗ್ಗೆ ಮಾತನಾಡಲು ಮಾನವರು ಅದೇ ಭಾಷೆಯನ್ನು ಬಳಸಬಹುದಾಗಿದೆ ಮತ್ತು ಬಳಸುತ್ತಿದ್ದಾರೆ. ಸ್ವಚೈತನ್ಯ ಎಂದರೆ ತನ್ನ ಬಲದ ಮೇಲೆ ಕೆಲಸ ಮಾಡುವುದು. ಮಾನವ ಭಾಷೆ ಸ್ವಚೈತನ್ಯವನ್ನು ಹೊಂದಿದೆ, ಅಂದರೆ, ಅದು ತನ್ನ ಬಗ್ಗೆಯೇ ಮಾತನಾಡಬಹುದು. ನಾವು ಈ ಲೇಖನದಲ್ಲಿ ಮಾಡುತ್ತಿರುವಂತೆ ಭಾಷೆಯ ಸಹಾಯದಿಂದ ಭಾಷೆಯ ಬಗ್ಗೆಯೇ ಮಾತನಾಡುವುದು. ಪ್ರಾಣಿಗಳು ತಮ್ಮ ಬಗ್ಗೆ ಅಥವಾ ತಮ್ಮ ಭಾಷೆ ಹಾಗೂ ಇತರರ ಭಾಷೆಯ ಬಗ್ಗೆ ತಮ್ಮ ಭಾಷೆಯಲ್ಲಿ ಮಾತನಾಡಲು ಸಾಧ್ಯವಿಲ್ಲ, ಆದರೆ ಮಾನವರು ಹಾಗೆ ಮಾಡಬಹುದು. ಭಾಷೆಯ ಸಹಾಯದಿಂದ, ಭಾಷೆಯ ಬಗ್ಗೆ ಯೋಚಿಸಲು ಸಾಧ್ಯವಾಗುವುದು ಮನುಷ್ಯ ಮತ್ತು ಭಾಷೆಯ ಸ್ವಭಾವದ ಮೇಲೆ ಪರಿಣಾಮ ಬೀರುತ್ತದೆ. ತನ್ನ ನಿರ್ಧಾರಗಳು, ಭಾವನೆಗಳು, ಆಲೋಚನೆಗಳು, ಗ್ರಹಿಕೆಗಳು, ನಂಬಿಕೆಗಳು, ತಿಳುವಳಿಕೆಗಳು ಇತ್ಯಾದಿಗಳ ಬಗ್ಗೆ ಯೋಚಿಸಲು, ಮಾತನಾಡಲು ಮತ್ತು ಚರ್ಚಿಸಲು ಹಾಗೂ ಯೋಚಿಸಲು ಸಾಧ್ಯವಾಗುತ್ತದೆ, ಹಾಗೆಯೇ ಭಾಷೆಯ ಬಳಕೆಯ ವಿಷಯದಲ್ಲಿ ವ್ಯಕ್ತಿಯು ತನ್ನನ್ನು ತಾನು ನಿಯಂತ್ರಿಸಿಕೊಳ್ಳಬಹುದು ಮತ್ತು ಬದಲಾಯಿಸಬಹುದು.

### ಕಲಿಕಾ ಯೋಗ್ಯ (Learnability)

ಭಾಷೆಯನ್ನು ಕಲಿಯಬಹುದು ಮತ್ತು ಕಲಿಸಬಹುದಾಗಿದೆ. ಒಬ್ಬ ಮಾತುಗಾರನು ತನ್ನ ಮೊದಲ ಭಾಷೆಯನ್ನು ಕಲಿತ ಹಾಗೆಯೇ ಇತರ ಭಾಷೆಗಳನ್ನು ಕಲಿಯುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಚಿಕ್ಕಮಕ್ಕಳು ಸುಲಭವಾಗಿ ಮತ್ತು ದಕ್ಷತೆಯಿಂದ ಭಾಷೆಗಳನ್ನು ಕಲಿಯುತ್ತಾರೆ ಎಂಬುದನ್ನು ಗಮನಿಸುವುದು ಮುಖ್ಯ. ಆದಾಗ್ಯೂ, ಕೆಲವು ಸಂಶೋಧನೆಗಳು ಭಾಷಾ ಕಲಿಕೆಗೆ ಒಂದು ನಿರ್ದಿಷ್ಟ ಹಂತವು ಮುಖ್ಯವಾಗಿದೆ ಎಂದು ಸೂಚಿಸುತ್ತದೆ. ಮಕ್ಕಳು ಆ ವಯೋಮಾನವನ್ನು ದಾಟಿದರೆ ನಂತರ ಭಾಷೆಯನ್ನು ಕಲಿಯಲು ಸ್ವಲ್ಪ ಕಷ್ಟವಾಗುತ್ತದೆ. ಇದರ ಹೊರತಾಗಿಯೂ ಒಂದು ಭಾಷೆಯನ್ನು ಕಲಿತ ನಂತರ ಯಾವುದೇ ವಯಸ್ಸಿನಲ್ಲಿ ಮನುಷ್ಯರು ಇತರ ಭಾಷೆಗಳನ್ನು ಕಲಿಯಬಹುದು.

## ಪುನರಾವರ್ತನೆ (Recursiveness)

ಪುನರಾವರ್ತನೆ ಎಂದರೆ ಘಟಕಗಳನ್ನು ಅವು ಇರುವ ರೀತಿಯಲ್ಲಿಯೇ ಮತ್ತೆ ಹೇಳುವುದು. ಉದಾಹರಣೆಗೆ, ಎರಡು ಕನ್ನಡಿಗಳನ್ನು ಮುಖಾಮುಖಿಯಾಗಿ ಇರಿಸಿದಾಗ ಅದರಲ್ಲಿ ಚಿತ್ರಗಳ ಬಿಂಬಗಳು ಕಂಡುಬರುತ್ತವೆ. ಮತ್ತು ಈ ಕನ್ನಡಿಗಳು ಸಮಾನಾಂತರವಾಗಿದ್ದರೆ ಬಿಂಬಗಳ ಪುನರಾವರ್ತನೆಯು ಅನಂತವಾಗಿರುತ್ತದೆ. ಮಾನವ ಭಾಷೆಯಲ್ಲಿ ಪುನರಾವರ್ತನೆಯನ್ನು ಅನುಮತಿಸಲಾಗಿದೆ. ಅಂದರೆ, ಅದರ ಉತ್ಪಾದಕತೆಯ ನಿಯಮಗಳಲ್ಲಿ ಕೆಲವು ತುಣುಕುಗಳನ್ನು ಪುನರಾವರ್ತಿಸಬಹುದು. ಇದರಲ್ಲಿ ಒಂದೇ ರೀತಿಯ ಘಟಕಗಳು ಒಂದರಲ್ಲೊಂದು ಸಮ್ಮಿಳಿತಗೊಂಡಿರುತ್ತವೆ. ಇತರ ಪ್ರಾಣಿಗಳು ಧ್ವನಿಗಳು ಅಥವಾ ಧ್ವನಿಗಳ ಅನುಕ್ರಮವನ್ನು ಮತ್ತೆ ಮತ್ತೆ ಪುನರಾವರ್ತಿಸಲು ಸಾಧ್ಯವಿಲ್ಲ ಎಂದು ಅರ್ಥವಲ್ಲ. ಉದಾಹರಣೆಗೆ, ಒಂದು ಚಿರತೆಯು ಪುನರಾವರ್ತನೆಯಿಲ್ಲದೆ ಅದೇ ಕರೆಯನ್ನು ಮತ್ತೆ ಮತ್ತೆ ಮಾಡಬಹುದು. ಅಂತೆಯೇ, ಕೆಲವು ಹಾಡುಹಕ್ಕಿಗಳು ಸಂಕೀರ್ಣವಾದ ಪದಗಳನ್ನು ಪುನರಾವರ್ತಿಸಬಹುದು. ಆದರೆ ಹೀಗೆ ಸರಳವಾಗಿ ಜೋಡಿಸುವುದು ಮತ್ತು ಪುನರಾವರ್ತಿಸುವುದರಲ್ಲಿ ಮನುಷ್ಯರ ಪುನರಾವರ್ತನೆಯನ್ನು ಪ್ರತ್ಯೇಕಿಸುವ ಲಕ್ಷಣವೆಂದರೆ ಅದರ ಸಂರಚನೆ (ವಾಕ್ಯ) ಗಳನ್ನು ತಮ್ಮದೇ ಆದ ರೀತಿಯಲ್ಲಿ ಸ್ವತಂತ್ರವಾಗಿ ರಚಿಸುವುದು.

ಇದಕ್ಕೆ ಕೆಲವು ಸರಳ ಉದಾಹರಣೆಗಳೆಂದರೆ: 'ಅವನು ನನ್ನ ಅಜ್ಜನ ಅಜ್ಜನ ಅಜ್ಜನ ಅಜ್ಜನ ಅಜ್ಜನ ಅಜ್ಜನ ಅಜ್ಜನ ಕಾಲದವನು' ಅಥವಾ 'ನನ್ನ ಸಂಬಂಧಿಯಾದ ಅವನು ನನ್ನ ಅಜ್ಜನ ಅಜ್ಜನ... ಮೊಮ್ಮಗ'. ಹಾಗೆಯೇ ಇಂಗ್ಲಿಷ್ ನಂತಹ ಭಾಷೆಯಲ್ಲಿ anti– anti anti anti anti- war ಅಥವಾ ಕೇವಲ anti anti. ಸಾಹಿತ್ಯದಲ್ಲಿಯೂ ಇಂತಹ ಅನೇಕ ಉದಾಹರಣೆಗಳಿವೆ, ಉದಾಹರಣೆಗೆ, "he can take a letter from you to her and then one from her to you and then one from you to her and then one..." ("ಅವನು ನಿಮ್ಮಿಂದ ಅವಳಿಗೆ ಪತ್ರವನ್ನು ತೆಗೆದುಕೊಳ್ಳಬಹುದು ಮತ್ತು ನಂತರ ಅವಳಿಂದ ನಿಮಗೆ ಒಂದು ಪತ್ರವನ್ನು ತೆಗೆದುಕೊಳ್ಳಬಹುದು, ನಂತರ ನಿಮ್ಮಿಂದ ಒಂದು ಅವಳಿಗೆ ಮತ್ತು ನಂತರ ಒಂದು ..." ((PG Wodehouse, Thank you Jeeves, 1934).

ಅದೇ ರೀತಿಯಲ್ಲಿ ನಾವು ಅಸಂಖ್ಯಾತ ವಾಕ್ಯಗಳನ್ನು ಮಾಡಬಹುದು. ಹಾಗೆ - 'ಅವನು ನನ್ನ ಸ್ಥಳದಿಂದ ಹಿಂತಿರುಗಿದಾಗ, ಒಬ್ಬರನ್ನೊಬ್ಬರು ತಲುಪುವುದು ನಮಗೆ ತುಂಬಾ ತಮಾಷೆಯಾಗಿದೆ ಮತ್ತು ನಂತರ ನಾನು ಅವನನ್ನು ಬಿಟ್ಟು ಹೋಗುತ್ತೇನೆ ಅವನು ನನ್ನನ್ನು ಬಿಟ್ಟು ಹೋಗುತ್ತಾನೆ, ನಂತರ ನಾನು ಅವನನ್ನು, ಅವನು ನನ್ನನ್ನು ಬಿಟ್ಟು...' ಇದೇ ರೀತಿ ಈ ವಾರ್ತಾಲಾಪ ಮುಂದುವರಿಯಬಹುದು. ಇದೇ ರೀತಿಯ ಇತರ ಉದಾಹರಣೆಗಳು, 'ವ್ಯಕ್ತಿ ಪ್ರಮುಖ ವ್ಯಕ್ತಿ, ಬಹಳ ಮುಖ್ಯ ವ್ಯಕ್ತಿ... ಮನೆಯಲ್ಲಿ ವಾಸಿಸುವ ಮಹಿಳೆ, ಅವನ ಸಹೋದರಿ, ಅವನ ಹೆಂಡತಿ, ಕೆಲಸಗಾರ, ಸಹೋದ್ಯೋಗಿ, ಗೆಳೆಯ, ಅಧಿಕಾರಿ, ಬುದ್ಧಿವಂತ ಎಂಬುದು ಮುಖ್ಯವಲ್ಲ..., ಅಯೋಗ್ಯ, ಮೂರ್ಖ, ಸುಂದರ, ಕುರೂಪಿ, ಅದು ಅವನ ತಾಯಿಯಾಗಿರಲಿ ಅಥವಾ ಬೇರೆಯವರಾಗಿರಲಿ, ಅವಳು ಅಲ್ಲಿರುವುದೇ ರಾಮನಿಗೆ ಇಷ್ಟವಾಗುತ್ತಿತ್ತು.

ಇದೇ ರೀತಿಯ ಉದಾಹರಣೆಗಳೆಂದರೆ, 'ಚಿರತೆ ಒಂದು ದೊಡ್ಡ, ಉಗ್ರ, ವೇಗದ ಓಟಗಾರ, ಕುತಂತ್ರದ ಮಾಂಸಾಹಾರಿ',... 'ಅವಳ ಲೇಖನಿ ಉದ್ದವಾಗಿದೆ, ಕೆಂಪು, ಮೊನಚಾದ, ಅಬ್ಬರದ, ದುಬಾರಿ ಆದರೆ ದುರ್ಬಲವಾಗಿತ್ತು'. ಇಲ್ಲಿ ಒಂದೇ ನಾಮಪದಕ್ಕೆ ಅನೇಕ ವಿಶೇಷಣಗಳು ಇರುವುದನ್ನು ನಾವು ನೋಡುತ್ತೇವೆ. ಮತ್ತು ಅದಕ್ಕೆ ಇನ್ನೂ ಹೆಚ್ಚಿನ ವಿಶೇಷಣಗಳನ್ನು ಸೇರಿಸಬಹುದು. ಇವೆಲ್ಲವೂ ವಿವಿಧ ರೀತಿಯ ಪುನರಾವರ್ತನೆಯ ಉದಾಹರಣೆಗಳಾಗಿವೆ. ಅದೇ ರೀತಿಯಲ್ಲಿ, ಇತರ ಅರ್ಥಪೂರ್ಣ ವಾಕ್ಯಗಳನ್ನು ಮಾನವ ಭಾಷೆಯಲ್ಲಿ ವಾಕ್ಯಗಳ ಒಳಗೆ ಸೇರಿಸಬಹುದು. ಉದಾಹರಣೆಗೆ, 'ರೋಶಿನಿ ಗಾಜು ಒಡೆದಿದ್ದಾಳೆ ಎಂದು ರಾಣಿ ನಂಬಿದ್ದಾಳೆಂದು ಮೋಹನ್ ಭಾವಿಸುತ್ತಾನೆ' ಅಥವಾ 'ದೆಹಲಿ, ಮುಂಬೈನ ದರಿಯಾಗಂಜ್‌ನಿಂದ ಬಂದ ಮೋಹನ್ ಚೌರಿಂಘೀ ಏರಿಯಾದ ಮನೆಯಲ್ಲಿ 112 ಐದು ವರ್ಷಗಳಿಂದ ವಾಸವಾಗಿರುವ ಅವರು ಒಳ್ಳೆಯ ವ್ಯಕ್ತಿ. ಹೀಗೆ ಪುನರಾವರ್ತನೆಯು ಭಾಷೆಯ ಎಲ್ಲ ಭಾಗಗಳ ಶ್ರೀಮಂತಿಕೆ ಮತ್ತು ನಿರೂಪಣೆಯನ್ನು ಹೆಚ್ಚಿಸುತ್ತದೆ. ಪುನರಾವರ್ತನೆ ಎಂದರೆ ಅದೇ ಶಬ್ದ ಅಥವಾ ಪದವನ್ನು ಮತ್ತೆ ಮತ್ತೆ ಪುನರಾವರ್ತಿಸುವುದಿಲ್ಲ. ಬದಲಿಗೆ, ಇದು ಅರ್ಥದ ಆಳ ಮತ್ತು ಪ್ರಮಾಣ ಎರಡನ್ನೂ ಬದಲಾಯಿಸುತ್ತದೆ.

# ಚೌಕಟ್ಟಿನಿಂದಾದ ಚೌಕಟ್ಟು

ಮಾನವ ಭಾಷೆಯನ್ನು ಚೌಕಟ್ಟಿನಿಂದಾದ ಚೌಕಟ್ಟು ಅಥವಾ ಸಂರಚನೆಗಳಿಂದ ಕೂಡಿದ ರಚನೆ ಎಂದು ಕರೆಯುತ್ತಾರೆ. ಇದಕ್ಕೆ ಕಾರಣವೆಂದರೆ ಈ ವಿನ್ಯಾಸದ ರಚನೆಯಲ್ಲಿ ಅನೇಕ ರಚನೆಗಳು ಸಮ್ಮಿಳಿತಗೊಂಡಿವೆ ಮತ್ತು ಈ ಎಲ್ಲ ರಚನೆಗಳು ತಮ್ಮದೇ ಆದ ನಿಯಮಗಳಿಗೆ ಬದ್ಧವಾಗಿವೆ. ಈ ರಚನೆಗಳು ಸ್ವತಂತ್ರ ರೂಪದಲ್ಲಿ ತಮ್ಮದೇ ಆದ ರೀತಿಯಲ್ಲಿ ಸೇರಿರುತ್ತವೆ ಹಾಗೂ ಮತ್ತು ಕೆಲವು ನಿಯಮಗಳ ಅಡಿಯಲ್ಲಿ ಪರಸ್ಪರ ಸಂಯೋಜಿಸಲ್ಪಡುತ್ತವೆ. ಭಾಷೆಗಳನ್ನು ಧ್ವನಿಯ ಮಟ್ಟದಲ್ಲಿ ಜೋಡಿಸಲಾಗಿದೆ, ಅಂದರೆ, ಪ್ರತಿಯೊಂದು ಭಾಷೆಯು ವ್ಯಂಜನ ಮತ್ತು ಸ್ವರಗಳ ಸಂಯೋಜನೆಯನ್ನು ಹೊಂದಿದ್ದು ಅವುಗಳ ಜೋಡಣೆಗೆ ನಿಯಮಗಳನ್ನು ಹೊಂದಿದೆ. ಕೆಲವು ನಿಯಮಗಳು ಎಲ್ಲ ಭಾಷೆಗಳಲ್ಲಿಯೂ ಸಾಮಾನ್ಯವಾಗಿ ಕಂಡುಬರುತ್ತವೆ. ಈ ಶಬ್ದಗಳು ಕೆಲವು ಸುಲಭವಾಗಿ ಉಚ್ಚರಿಸಬಹುದಾದ ತುಣುಕುಗಳ ರೂಪದಲ್ಲಿವೆ. ಈ ಶಬ್ದಗಳನ್ನು ಹೇಗೆ ಸಂಯೋಜಿಸಲಾಗಿದೆ ಎಂಬುದಕ್ಕೆ ಕೆಲವು ಸಾಮಾನ್ಯ ನಿಯಮಗಳಿವೆ. ನಾವು ಅವರ ಬಗ್ಗೆ ಇಲ್ಲಿ ಮಾತನಾಡುವುದಿಲ್ಲ. ಆದಾಗ್ಯೂ ಸಾಮಾನ್ಯವಾಗಿ ಈ ತುಣುಕುಗಳು ವ್ಯಂಜನ-ಸ್ವರ-ವ್ಯಂಜನ-ಸ್ವರ ಎಂಬ ನಿಯಮವಿದೆ…. ಮತ್ತು ಅನೇಕ ವ್ಯಂಜನಗಳನ್ನು ಏಕಕಾಲದಲ್ಲಿ ಅನುಕ್ರಮವಾಗಿ ಬಳಸುವುದಿಲ್ಲ. ಈ ಧ್ವನಿಯ ತುಣುಕುಗಳು ಶಬ್ದಪುಂಜಗಳನ್ನು ರೂಪಿಸಿ ಅವಕ್ಕೆ ಅರ್ಥವನ್ನು ಲಗತ್ತಿಸುತ್ತವೆ. ಇವುಗಳನ್ನು ಪದಗಳೆಂದು ಕರೆಯಲಾಗುತ್ತದೆ. ಪದಗಳ ರಚನೆಗೆ ಒಂದು ಚೌಕಟ್ಟಿದೆ. ಈ ಚೌಕಟ್ಟನ್ನು ಸಹ ಕಟ್ಟುನಿಟ್ಟಾಗಿ ನಿಯಮಗಳಿಂದ ಬಂಧಿಸಲಾಗಿದೆ. ಹಾಗೆ 'ನಡೆ' ಒಂದು ಕ್ರಿಯಾಪದವಾದರೆ ಮತ್ತು 'ತಿನ್ನು' ಇನ್ನೊಂದು ಕ್ರಿಯಾಪದ. ಅಲ್ಲದೆ 'ಹೋಗು' ಪದದಿಂದ ಹೋಗುತ್ತಾ, ಹೋಗುವ, ಹೋಗುತ್ತಾಳೆ, ಹೋಗುತ್ತಾನೆ, ಹೋಗೋಣ… ಇತ್ಯಾದಿ ಎಲ್ಲ ರೂಪಗಳು ಆಗುತ್ತವೆ. ಇದೇ ರೀತಿ 'ತಿನ್ನು, ಹಾಡು, ಕುಡಿ, ಕುಣಿ… ಮುಂತಾದ ಕ್ರಿಯಾಪದಗಳ ವಿಷಯದಲ್ಲಿಯೂ ಹಾಗೇ ಆಗುತ್ತದೆ. ಹೊಸ ಕ್ರಿಯಾಪದವು ಕಂಡುಬಂದಾಗ, ಉದಾಹರಣರೆಗೆ ಹಿಂದಿಯಲ್ಲಿ 'ಚಲ್' ಎಂಬ ಕ್ರಿಯಾಪದವಿದೆ ಎಂದು ಭಾವಿಸೋಣ, ಆಗ ಅದು ವಾಕ್ಯದಲ್ಲಿ ಬಳಕೆಯಾಗುವಾಗ ಚಲ್‌ನಾ, ಚಲ್‌ತಾ, ಚಲ್‌ತೀ, ಚಲೇ… ಇತ್ಯಾದಿ ರೂಪಗಳನ್ನು ಪಡೆಯುತ್ತದೆ. ಅದೇ ರೀತಿ 'ಚಾಪ್' ಎಂಬ ಕ್ರಿಯಾಪದವಿದೆ ಎಂದುಕೊಳ್ಳಿ, ಅದು ಚಾಪ್ನಾ, ಚಾಪ್ತಾ, ಚಾಪ್ತೀ, ಚಾಪೇ, ಚಾಪೋ… ಮುಂತಾದ ರೀತಿಯಲ್ಲಿ ಬಳಕೆಯಾಗುತ್ತದೆ. ಅದೇ ರೀತಿ ನಾಮಪದಗಳ ರೂಪಗಳನ್ನೂ ರಚಿಸಬಹುದು. ಇದು ಪದಗಳ ಹಂತದಲ್ಲಿ ಆಗುವ ವ್ಯವಸ್ಥೆಯ ಸಾಧ್ಯತೆಗಳು ಮತ್ತು ರೂಪಗಳ ಒಂದು ನೋಟವಾಗಿದೆ.

ಪದಗಳ ನಂತರ, ರಚನೆಯನ್ನು ವಾಕ್ಯಗಳ ಮಟ್ಟದಲ್ಲಿ ಆಯೋಜಿಸಲಾಗಿದೆ. ಪ್ರತಿಯೊಂದು ವಾಕ್ಯವೂ ಪದಗಳ ವ್ಯವಸ್ಥಿತ ಜೋಡಣೆಯನ್ನು ಹೊಂದಿದೆ. ಈ ಸಂಯೋಜನೆಗೆ ನಿಯಮಗಳಿವೆ, ಅವುಗಳಲ್ಲಿ ಕೆಲವು ಪ್ರತಿಯೊಂದು ಮಾನವ ಭಾಷೆಯಲ್ಲಿಯೂ ಸಾಮಾನ್ಯವಾಗಿ ಕಂಡುಬರುತ್ತವೆ. ಈ ರಚನೆಯಿಂದಾಗಿ, ಮಾತನಾಡುವವರು ಅಥವಾ ಓದುಗರು ಹೇಳಿಕೆಯ ಅರ್ಥವನ್ನು ಗ್ರಹಿಸಲು ಮತ್ತು ಅದನ್ನು ಇತರರೊಂದಿಗೆ ಹಂಚಿಕೊಳ್ಳಲು ಸಾಧ್ಯವಾಗುತ್ತದೆ. ಪ್ರತಿಯೊಂದು ಭಾಷೆಯಲ್ಲಿಯೂ ವಾಕ್ಯಗಳನ್ನು ರಚಿಸಲು ನಿಯಮಗಳಿವೆ.

ನಮಗೆ ತಿಳಿದಿರುವಂತೆ, ಯಾವುದೇ ಭಾಷೆಯ ವಿವಿಧ ವಿಭಾಗಗಳಿಂದ ಆಯ್ದ ಐದು ಅಥವಾ ಆರು ಪದಗಳನ್ನು ತೆಗೆದುಕೊಂಡು ಅನೇಕ ವಾಕ್ಯಗಳನ್ನು ರಚಿಸಬಹುದಾಗಿದೆ. ನಾವು ಅವುಗಳನ್ನು ಹಲವು ರೀತಿಯಲ್ಲಿ ವಿವಿಧ ಕ್ರಮದಲ್ಲಿ ಜೋಡಿಸಬಹುದು, ಆದರೆ ಅವುಗಳನ್ನು ಸೇರಿಸಲು ವ್ಯಾಕರಣ ನಿಯಮಗಳಿವೆ. ಹಾಗಾಗಿ ಪ್ರತಿಯೊಂದು ವಿಭಿನ್ನ ಅನುಕ್ರಮವು ಮಾನ್ಯವಾಗಿಲ್ಲ. ಇಂಗ್ಲಿಷ್‌ನಲ್ಲಿ, ಕ್ರಿಯಾಪದವು ಒಂದು ವಾಕ್ಯದಲ್ಲಿ ಕರ್ತೃ ಮತ್ತು ಕರ್ಮಪದಗಳ ನಡುವೆ ಮಾತ್ರ ಬರಬಹುದು. ಇತರ ಅನುಕ್ರಮಗಳು ಮಾನ್ಯವಾಗಿಲ್ಲ. ಅಂದರೆ ಅರ್ಥಪೂರ್ಣವಾದ ಪದಗಳಿಂದ ಮಾಡಿದ ವಾಕ್ಯಗಳೆಲ್ಲವೂ ನಿಯಮಾನುಸಾರವಾಗಿಯೇ ಇದ್ದರೂ ಕೆಲವೊಮ್ಮೆ ಅರ್ಥಪೂರ್ಣವಾಗಿರುವುದಿಲ್ಲ. ಹಾಗೆಯೇ, ಶಬ್ದಗಳನ್ನು ಒಟ್ಟುಗೂಡಿಸಿ ರೂಪುಗೊಂಡ ಅನೇಕ ಪದಗಳು ಸರಳ, ಸುಲಭ ಮತ್ತು ಮಾತನಾಡಲು ಆಕರ್ಷಕವಾಗಿರಬಹುದು, ಆದರೆ ಅಂತಹ ಎಲ್ಲ ಪದಗಳು ಅರ್ಥವತ್ತಾಗಿರುವುದಿಲ್ಲ. ಸಂಕ್ಷಿಪ್ತವಾಗಿ, ಇವೆಲ್ಲವನ್ನೂ ನೋಡುವಾಗ, ಧ್ವನಿಯ ಘಟಕಗಳನ್ನು ಸಂಘಟಿಸಲು ಒಂದು ಮಾರ್ಗವಿದೆ ಎಂದು ನಾವು ಕಂಡುಕೊಳ್ಳುತ್ತೇವೆ. ಪ್ರತಿಯೊಂದು ಭಾಷೆಯಲ್ಲಿಯೂ ಒಂದು ವ್ಯವಸ್ಥೆಯು ರೂಪುಗೊಳ್ಳುತ್ತದೆ

ಹಾಗೂ ಧ್ವನಿಗಳ ತುಣುಕುಗಳನ್ನು ಪದಗಳಾಗಿ ಸಂಯೋಜಿಸಲು ಹೆಚ್ಚು ವ್ಯವಸ್ಥಿತವಾದ ಸಂರಚನೆ ಇದೆ. ತದನಂತರ ಪದಗಳನ್ನು ವಾಕ್ಯಗಳಾಗಿ ಸಂಘಟಿಸಲು ಹೆಚ್ಚು ವ್ಯವಸ್ಥಿತವಾದ ಚೌಕಟ್ಟು ಇದೆ.

ವಾಕ್ಯಗಳು ಸಹ ಸಂದೇಶವನ್ನು ಅರ್ಥವಾಗುವಂತೆ ಕ್ರಮವಾಗಿ ಜೋಡಿಸಬೇಕು. ಇದನ್ನು ಪ್ರವಚನ ಹಂತದ ವ್ಯವಸ್ಥೆ ಎಂದು ಕರೆಯಲಾಗುತ್ತದೆ. ಅದರ ಕೆಲವು ನಿಯಮಗಳು ಸರಳವಾಗಿದೆ, ಆದರೆ ಕೆಲವು ನಿಯಮಗಳು ಹೆಚ್ಚು ಸೂಕ್ಷ್ಮ ಮತ್ತು ನಿರ್ದಿಷ್ಟವಾಗಿರುತ್ತವೆ. ಅದು ಜನರಿಗೆ ಅರ್ಥಮಾಡಿಕೊಳ್ಳಲು ಸುಲಭ ಮತ್ತು ಉತ್ತಮ ವಿಚಾರಗಳನ್ನು ನೀಡುತ್ತದೆ. ಉದಾಹರಣೆಗೆ, ಒಂದು ಪಠ್ಯವು ಆಗ್ರಾ ಮತ್ತು ತಾಜ್ ಮಹಲ್ ಕುರಿತು ಮಾತನಾಡಿದರೆ, ಆಗ್ರಾದ ನಂತರದ ವಾಕ್ಯದಲ್ಲಿ ' ಓವರ್ ದೇರ್' (ಅಲ್ಲಿ) ಎಂಬ ಪದಗುಚ್ಛವು ಆಗ್ರಾ ನಗರವನ್ನು ಉಲ್ಲೇಖಿಸುತ್ತದೆಯೇ ಹೊರತು ಸಿಹಿತಿಂಡಿಯನ್ನಲ್ಲ.

### ಭಾಷಾ ಚೌಕಟ್ಟು

**ಸಂಭಾಷಣೆಯ ಹಂತ** - ವಾಕ್ಯಗಳಲ್ಲಿ ತಿಳಿಸಲಾದ ಕಲ್ಪನೆ; ವಾಕ್ಯಗಳ ಅನುಕ್ರಮ; ವಾಕ್ಯಗಳಲ್ಲಿ ಪರಸ್ಪರ ಸಂಬಂಧಗಳು.

**ವಾಕ್ಯದ ಹಂತ** - ಪದಗಳ ಜೋಡಣೆಯ ವಿಧಾನ ಮತ್ತು ಅವುಗಳ ನಿಯಮಗಳು; ನಕಾರಾತ್ಮಕ ವಾಕ್ಯಗಳು, ಪ್ರಶ್ನಾರ್ಹ ವಾಕ್ಯಗಳು, ಗೌರವ ಸೂಚಕ ಇತ್ಯಾದಿ ವಾಕ್ಯಗಳ ಅನುಕ್ರಮ.

**ಪದಗಳ ಹಂತ** - ಪದಗಳ ಪ್ರಾರಂಭ ಮತ್ತು ಕೊನೆಯಲ್ಲಿ ಬಳಸಬೇಕಾದ ಪದಗಳ ಮಾದರಿ, ಉದಾಹರಣೆಗೆ ಬಹುವಚನಗಳನ್ನು ಮಾಡುವುದು, ಕ್ರಿಯಾಪದ ರೂಪಗಳನ್ನು ಬದಲಾಯಿಸುವುದು- ಹಾಡು, ಹಾಡುತ್ತಾನೆ, ಹಾಡುತ್ತಾಳೆ.

**ಧ್ವನಿಯ ಹಂತ** - ವಿವಿಧ ಧ್ವನಿಗಳ ಉಪಸ್ಥಿತಿ, ಸ್ವರಗಳು ಮತ್ತು ವ್ಯಂಜನಗಳು, ಧ್ವನಿಗಳ ಜೋಡಣೆ, ವ್ಯಂಜನ-ಸ್ವರ-ವ್ಯಂಜನ-ಸ್ವರ, ಇತ್ಯಾದಿ.

### ಕೆಲವು ವ್ಯಾಖ್ಯಾನಗಳು

**ಉಚ್ಛಾರಾಂಶ (Syllable)** - ಸ್ವರ ಧ್ವನಿಯನ್ನು ಒಳಗೊಂಡಿರುವ ಉಚ್ಚಾರಣೆಯ ಒಂದು ಘಟಕ. ಈ ಸ್ವರ ಘಟಕವು ವ್ಯಂಜನದ ಧ್ವನಿಯಿಂದ ಸುತ್ತುವರೆದಿರಬಹುದು ಅಥವಾ ಇಲ್ಲದಿರಬಹುದು. ಉಚ್ಚಾರಾಂಶಗಳು ಪದದ ಭಾಗಗಳಾಗಿರಬಹುದು ಅಥವಾ ಕೆಲವೊಮ್ಮೆ ಅದೇ ಸಂಪೂರ್ಣ ಪದವಾಗಿರಬಹುದು. ಉದಾಹರಣೆಗೆ, 'ಪಾನೀ' ಪದವು 'ಪಾ' ಮತ್ತು 'ನೀ' ಹೊಂದಿದೆ. ಈ ಎರಡೂ ಪದದ ಭಾಗಗಳು. 'ಪಾನೀ'ಯಲ್ಲಿ ಕೇವಲ ಎರಡು ಉಚ್ಛಾರಾಂಶಗಳಿವೆ. ಆದರೆ 'ಪಾಣಿನಿ'ಯಲ್ಲಿ ಮೂರು- 'ಪಾ', 'ಣಿ' ಮತ್ತು 'ನಿ' ಎಂಬ ಉಚ್ಛಾರಾಂಶಗಳಿವೆ. 'ಆ' ಎಂಬ ಪದವು ಕೇವಲ ಒಂದು ಉಚ್ಚಾರಾಂಶವನ್ನು ಹೊಂದಿದೆ, ಇತ್ಯಾದಿ ಹಾಗೆಯೇ 'ಜಾ', 'ಲಾ', 'ನಾ', 'ಗಾ' ಇತ್ಯಾದಿಗಳಲ್ಲಿಯೂ ಕೇವಲ ಒಂದು ಉಚ್ಚಾರಾಂಶವಿದೆ. ಸಾಮಾನ್ಯವಾಗಿ, ಪದಗಳಲ್ಲಿ ಉಚ್ಚಾರಾಂಶಗಳನ್ನು ಗುರುತಿಸುವುದು ಸುಲಭ, ಏಕೆಂದರೆ ಅವು ಸಾಮಾನ್ಯವಾಗಿ ಸ್ವರಗಳ ಸಂಖ್ಯೆಯನ್ನು ಆಧರಿಸಿರುತ್ತದೆ. ಆದರೆ ಕೆಲವೊಮ್ಮೆ ಧ್ವನಿಗಳು ಒಟ್ಟೊಟ್ಟಿಗೆ ಬಂದಾಗ ಭಾಷೆಯ ವೈಜ್ಞಾನಿಕ ಜ್ಞಾನ ಅಥವಾ ಭಾಷಾಶಾಸ್ತ್ರದ ಅರಿವಿನ ಅಗತ್ಯವಿರುತ್ತದೆ.

**ಧ್ವನಿಮಾ (Phoneme)** - ಯಾವುದೇ ಭಾಷೆಯ ಧ್ವನಿಗಳ ಅಥವಾ ಉಚ್ಚಾರಾಂಶಗಳಲ್ಲಿನ ಧ್ವನಿಯ ಅತ್ಯಂತ ಚಿಕ್ಕ ವಿಶಿಷ್ಟ ಘಟಕ. ಉದಾಹರಣೆಗೆ, ಹಿಂದಿ ಪದ 'ಮೀತ್' ಮೂರು ಸತತ ಫೋನೆಮ್‌ಗಳನ್ನು ಹೊಂದಿದೆ- /ಮ್/, /ಈ/ ಹಾಗೂ /ತ್/. ಅಂತೆಯೇ, ಇಂಗ್ಲಿಷ್‌ನಲ್ಲಿನ 'ಟಿಪ್' ಪದವು /t/, /i/ ಮತ್ತು /p/ಎಂಬ ಮೂರು ಧ್ವನಿಮಾಗಳನ್ನು ಹೊಂದಿದೆ.

**ಧ್ವನಿಮಾ (Phoneme)** ಗಳ ಆಳವಾದ ಮತ್ತು ವಿಸ್ತೃತ ವ್ಯಾಖ್ಯಾನಗಳು ವಿಭಿನ್ನ ಸಿದ್ಧಾಂತಗಳಲ್ಲಿ ಭಿನ್ನವಾಗಿರುತ್ತವೆ. ಆದರೆ ಒಟ್ಟಾರೆ ಹೇಳುವುದಾದರೆ, ಎರಡು ವಿಭಿನ್ನ ಧ್ವನಿಗಳು ಬೇರೆ ಬೇರೆ ಧ್ವನಿಮಾ (Phoneme) ಗಳಿಂದ ಮಾಡಲ್ಪಟ್ಟಿವೆ, ಅವುಗಳು ವಿಭಿನ್ನ ಧ್ವನ್ಯಾತ್ಮಕ ವ್ಯತ್ಯಾಸಗಳನ್ನು ತೋರಿಸಿದರೆ ಮಾತ್ರ ಅವನ್ನು ಧ್ವನಿಮಾ ಎನ್ನಬಹುದಾಗಿದೆ. ಅಂತಹ ವ್ಯತ್ಯಾಸಗಳು ಅವುಗಳ ಅರ್ಥದಲ್ಲಿಯೂ ವ್ಯತ್ಯಾಸವನ್ನು ಉಂಟುಮಾಡುತ್ತವೆ. ಈ ರೀತಿಯಾಗಿ, ಹಿಂದಿಯಲ್ಲಿ 'ಮೀತ್' ಮತ್ತು 'ಮಾತ್' ನಡುವೆ

ವ್ಯತ್ಯಾಸವಿದೆ. ಇದು /ಈ/ ಮತ್ತು /ಆ/ ಎಂಬ ಎರಡು ವಿಭಿನ್ನ ಫೋನೆಮ್‌ಗಳ ನಡುವಿನ ವ್ಯತ್ಯಾಸದಿಂದಾಗಿದೆ. ಹಾಗೆಯೇ ಇಂಗ್ಲಿಷ್‌ನಲ್ಲಿ ಉದಾಹರಣೆಗೆ ತೆಗೆದುಕೊಳ್ಳಿ, 'ಟಿಪ್' ಮತ್ತು 'ಟ್ಯಾಪ್' ನಡುವೆ ವ್ಯತ್ಯಾಸವಿದೆ ಮತ್ತು ಅದು /i/ ಮತ್ತು /a/ ಬಳಕೆಯ ಕಾರಣದಿಂದ ಉಂಟಾಗಿದೆ. ಅದೇ ರೀತಿ, 'ಜೀಮ್' (ರಾಜಸ್ಥಾನಿ ಹಿಂದಿ ಪದದ ಅರ್ಥ ತಿನ್ನು) ಮತ್ತು 'ಜಾಮ್' ನಡುವೆ ವ್ಯತ್ಯಾಸವಿದೆ ಮತ್ತು ಈ ವ್ಯತ್ಯಾಸವು /ಈ/ ಮತ್ತು /ಆ/ ಕಾರಣದಿಂದಾಗಿದೆ. ಅಂದರೆ, e ಮತ್ತು a ಈ ಎರಡೂ ಪದಗಳಿಗೆ ನಿರ್ದಿಷ್ಟ ಅರ್ಥಗಳನ್ನು ನೀಡುವ ಸಾಮರ್ಥ್ಯವನ್ನು ಹೊಂದಿರುವ ಪದಗಳ ಚಿಕ್ಕ ವಿಭಿನ್ನ ಘಟಕಗಳಾಗಿವೆ. ಹಾಗೆಯೇ ಮತ್ತೊಂದು ಗಮನಾರ್ಹ ವಿಷಯವೆಂದರೆ ಈ ನಿರ್ದಿಷ್ಟ ಧ್ವನಿಗಳನ್ನು ವಿಭಿನ್ನ ಸಮಯದ ಅಂತರದಲ್ಲಿ ಮಾತನಾಡಲಾಗುತ್ತದೆ. ಅಂದರೆ, ನೀವು ಒಂದೇ ಸಮಯದಲ್ಲಿ ಎರಡೂ ಧ್ವನಿಗಳನ್ನು ಮಾತನಾಡಲು ಸಾಧ್ಯವಿಲ್ಲ. ಹಾಗೂ ಮೂರನೆಯದಾಗಿ, e ಮತ್ತು a ಎರಡೂ ಪ್ರತ್ಯೇಕ ಧ್ವನಿಮಾಗಳಾಗಿವೆ, ಏಕೆಂದರೆ ಅವುಗಳನ್ನು ಮತ್ತಷ್ಟು ಸಣ್ಣ ಘಟಕವಾಗಿ ವಿಭಜಿಸಲಾಗುವುದಿಲ್ಲ. ಈ ಮಧ್ಯಂತರವು ಕೇವಲ ಕ್ಷಣಿಕವಾಗಿದ್ದರೂ ಸಹ, ಎರಡು ಚಿಕ್ಕ ಘಟಕಗಳನ್ನು ಮಾತನಾಡುವಲ್ಲಿ ಸ್ವಲ್ಪ ಸಮಯದ ಅಂತರವಿದೆ ಎಂಬುದು ಗಮನಾರ್ಹ ಸಂಗತಿ.

**ರೂಪಿಮಾ (Morpheme)** – ಪದಕ್ಕಿಂತ ಚಿಕ್ಕದಾದ ವ್ಯಾಕರಣದ ಅರ್ಥಪೂರ್ಣ ಘಟಕ. ಆದರೆ ಈ ಘಟಕವು ಪದದಿಂದ ಭಿನ್ನವಾಗಿದೆ ಏಕೆಂದರೆ ಅದು ಸ್ವತಂತ್ರ ಅರ್ಥವನ್ನು ಹೊಂದಿರಬೇಕಾಗಿಲ್ಲ. ಆದರೆ ಪದದಲ್ಲಿ ಅದು ತನ್ನ ಅರ್ಥವನ್ನು ನೀಡುತ್ತದೆ ಮತ್ತು ಅದು ತನ್ನದೇ ಆದ ಸ್ವತಂತ್ರ ಅರ್ಥವನ್ನು ಹೊಂದಬಹುದು ಹಾಗೂ ಅರ್ಥವನ್ನು ಬದಲಾಯಿಸುವ ಮತ್ತು ಏನನ್ನಾದರೂ ಸೇರಿಸುವ ಕೆಲಸವನ್ನೂ ಮಾಡಬಹುದು. ಉದಾಹರಣೆಗೆ, ಹಿಂದಿಯ 'ಗೈರ್-ಜರೂರೀ' ಯಲ್ಲಿ 'ಗೈರ್' ಮತ್ತು 'ಜರೂರೀ' ಎಂಬ ರೂಪಿಮಾಗಳನ್ನು ಹೊಂದಿದೆ. ಹಾಗೆಯೇ ಇಂಗ್ಲಿಷ್ ಪದ incoming ನಲ್ಲಿ in, –come ಮತ್ತು –ing ಎಂಬ ಮೂರು ರೂಪಿಮಾಗಳಿವೆ.

ಈ ಪದವನ್ನು ಮೊದಲು 19 ನೇ ಶತಮಾನದ ಕೊನೆಯಲ್ಲಿ ಬಳಸಲಾಯಿತು. ಅದರ ಮೂರು ಮುಖ್ಯ ಅಂಶಗಳನ್ನು ನಾವು ಈ ರೀತಿಯಲ್ಲಿ ಅರ್ಥಮಾಡಿಕೊಳ್ಳಬಹುದು. ಮೊದಲನೆಯದು, ರೂಪಿಮಾ (Morpheme) ಪದಕ್ಕಿಂತ ಚಿಕ್ಕದಾಗಿದೆ ಮತ್ತು ಸ್ವತಂತ್ರ ಅರ್ಥವನ್ನು ಹೊಂದಿರದ ಆದರೆ ವ್ಯಾಕರಣದ ಅರ್ಥವನ್ನು ಹೊಂದಿರುವ ಘಟಕವಾಗಿದೆ.

ಎರಡನೆಯದಾಗಿ, ವ್ಯಾಕರಣದ ಅರ್ಥ ಅಥವಾ ಅಕ್ಷರಶಃ ಅರ್ಥವನ್ನು ಹೊಂದಿರುವ ಪದದೊಳಗೆ ಧ್ವನಿ ಘಟಕಗಳ ಯಾವುದೇ ವ್ಯವಸ್ಥೆಯು ಮಾರ್ಫೀಮ್ ಆಗಿದೆ. ಉದಾಹರಣೆಗೆ, 'ಅಗತ್ಯವಲ್ಲದ' ಮತ್ತು 'ಅಗತ್ಯ'. ಇದರಲ್ಲಿ 'ಅಲ್ಲದ' ಎಂಬುದಕ್ಕೆ ವ್ಯಾಕರಣದ ಅರ್ಥವೇನೆಂದರೆ, ಅದು ಯಾವುದೇ ಪದದೊಂದಿಗೆ ಬಂದರೂ ಅದು ನಕಾರಾತ್ಮಕ ಭಾವನೆಯನ್ನು ನೀಡುತ್ತದೆ. ಬೇಜವಾಬ್ದಾರಿ, ಅಸ್ತಿತ್ವದಲ್ಲಿಲ್ಲದ, ಕಾನೂನುಬಾಹಿರ ಇದು ವ್ಯಾಕರಣದ ವರ್ಗವಾಗುತ್ತದೆ. ಹಾಗೆಯೇ ಹಿಂದಿಯ 'ಗೈರ್' ಎಂಬ ಪದದ ಶಾಬ್ದಿಕ ಅರ್ಥವೂ ಇದೆ, ಅದರ ಅರ್ಥ ಅಂದರೆ 'ಇಲ್ಲದ' ಅಥವಾ ಪರಿಚಯವಿಲ್ಲದ ಎಂದದು ಆಗಬಹುದು.

ಮೂರನೆಯದಾಗಿ, ಇದು ಒಂದು ಅಥವಾ ಹೆಚ್ಚಿನ ಧ್ವನಿ ಘಟಕಗಳ ಸಂರಚನೆಯಿಂದ ಅರಿತುಕೊಳ್ಳಬಹುದಾದ ಒಂದು ಬದಲಾಗದ ವ್ಯಾಕರಣದ ಘಟಕವಾಗಿದೆ, ಉದಾಹರಣೆಗೆ ನಾವು ಮೇಲಿನ ಉದಾಹರಣೆಗಳಲ್ಲಿ ನೋಡಿದಂತೆ ಅಥವಾ 'ಅ' ದಿಂದ ರಚಿತಗೊಳ್ಳಬಹುದು, ಉದಾಹರಣೆಗೆ, 'ಅಸತ್ಯ'ಅಥವಾ 'ಅಪೂರ್ಣ' ಮತ್ತು 'ಅನ್' ಕೂಡಿ ಬರುವ 'ಅನಗತ್ಯ, ಇತ್ಯಾದಿ. unladylike ಎಂಬ ಇಂಗ್ಲಿಷ್ ಪದವು ಮೂರು ಮಾರ್ಫೀಮ್‌ಗಳು ಮತ್ತು ನಾಲ್ಕು ಉಚ್ಚಾರಾಂಶಗಳಿಂದ ಮಾಡಲ್ಪಟ್ಟಿದೆ.

ಇದು un ಮಾರ್ಫೀಮ್ ಅನ್ನು ಹೊಂದಿದೆ ಅಂದರೆ 'ಇಲ್ಲ' ಅಂದರೆ not ಎಂಬ ಭಾವನೆಯನ್ನು ನೀಡುತ್ತದೆ. 'lady' ಎಂದರೆ 'ಒಳ್ಳೆಯ ನಡತೆಯ ಮಹಿಳೆ' ಎಂದರ್ಥ. ಹಾಗೂ like 'ಹಾಗೆ' ಎಂಬ ಅರ್ಥವನ್ನು ನೀಡುತ್ತದೆ. ಈ ಯಾವುದೇ ಮಾರ್ಫೀಮ್‌ಗಳನ್ನು ಇನ್ನೂ ಸಣ್ಣ ತುಂಡುಗಳಾಗಿ ವಿಭಜಿಸಲು ಸಾಧ್ಯವಿಲ್ಲ. ಹಾಗೆ ಒಡೆದಲ್ಲಿ ಪದದಲ್ಲಿ ಆ ಮಾರ್ಫೀಮ್ ಅರ್ಥವನ್ನು ಕಳೆದುಕೊಳ್ಳುತ್ತದೆ. lady ಸ್ವತಂತ್ರ ಉಚ್ಚಾರಾಂಶಗಳಾಗಿರುವುದರಿಂದ la ಮತ್ತು dy ಆಗಿ ವಿಭಜಿಸಲಾಗುವುದಿಲ್ಲ.

**ಪದ (Word)** – ಪದವು ಸಂಭಾಷಣೆಯ ಚಿಕ್ಕ ಅರ್ಥಪೂರ್ಣ ಘಟಕವಾಗಿದೆ. ಪದಗಳನ್ನು ರೂಪಿಸಲು ಹಲವು ಆಧಾರಗಳಿವೆ, ವಿಶಾಲವಾಗಿ ಹೇಳುವುದಾದರೆ, ಒಂದು ಪದವು ಸ್ವತಂತ್ರ ಅರ್ಥವನ್ನು ಹೊಂದಿದ ಉಚ್ಚಾರಣೆಯಿಂದ ರೂಪುಗೊಂಡ ಚಿಕ್ಕ

ಅರ್ಥಪೂರ್ಣ ಘಟಕವಾಗಿದೆ. ಬ್ಲೂಮ್‌ಫೀಲ್ಡ್‌ನ ಪರಿಭಾಷೆಯ ಪ್ರಕಾರ, ಪದವು ತ್ಯಂತ ಚಿಕ್ಕ ಸ್ವತಂತ್ರ ರೂಪ (Minimal Free Form) ಆಗಿದೆ. ಉದಾಹರಣೆಗೆ, ಸಾಂದರ್ಭಿಕವಾಗಿ, 'ಹೋಗು', 'ಬನ್ನಿ', 'ಒಳ್ಳೆಯದು' ಇತ್ಯಾದಿಗಳು ಸಂಪೂರ್ಣ ಅರ್ಥವನ್ನು ಸ್ವತಃ ವ್ಯಕ್ತಪಡಿಸಬಹುದು.

***